# ಸುದರ್ಶನ

(ಸಾಮಾಜಿಕ ಕಾದಂಬರಿ)

ಆನಂದಕಂದ

೨ನೆಯ ಮುದ್ರಣ

ಎಪ್ರಿಲ್ ೧೯೪೧

ಸಾದಾ ಪ್ರತಿಗೆ ೦-೧೪-೦ ] [ ಕ್ಯಾಲಿಕೊ ಪ್ರತಿಗೆ ೧-೨-೦

# ಮುನ್ನುಡಿ

೧೯೩೩ನೆಯ ಇಸ್ವಿಯಲ್ಲಿ ಮನೋಹರ ಗ್ರಂಥಮಾಲೆಯ ಮೊದಲನೆಯ ಹೂವಾಗಿ ಪ್ರಕಟವಾದ ಈ ಸಾಮಾಜಿಕ ಕಾದಂಬರಿಯು, ಅಂದು ಅನೇಕ ಜನರ ಮೆಚ್ಚಿಕೆಗೆ ಪಾತ್ರವಾಯಿತು. ಅದರ ಪರಿಣಾಮವಾಗಿ ಒಂದು ವರ್ಷದಲ್ಲಿಯೆ ಇದರ ಮೊದಲನೆಯ ಮುದ್ರಣದ ಪ್ರತಿಗಳೆಲ್ಲ ತೀರಿದುವು. ಎರಡನೆಯ ಮುದ್ರಣ ಹೊರಡಿಸಬೇಕು ಎಂಬ ವಿಚಾರದಲ್ಲಿಯೆ ೬-೭ ವರ್ಷಗಳು ಕಳೆದು ಹೋದುವು. ಯಾವುದಕ್ಕೂ ಅನುಕೂಲಕಾಲ ಬೇಕು. ಇಂತಹ ಅನನುಕೂಲ ಕಾಲದಲ್ಲಿಯೂ ಅಂತಹ ಅನುಕೂಲಕಾಲ ಕೂಡಿಬಂದಿತೆಂದೆ 'ಸುದರ್ಶನ'ದ ಎರಡನೆಯ ಮುದ್ರಣ ಹೊರಡಲು ಸಾಧ್ಯವಾಯಿತು.

ಈ ಎರಡನೆಯ ಮುದ್ರಣದಲ್ಲಿ ವಿಶೇಷ ಬದಲಾವಣೆಗಳೇನೂ ಇಲ್ಲವಾದರೂ, ಅಲ್ಲಿ ಇಲ್ಲಿ ಮಾತುಗಳಲ್ಲಿ ಸ್ವಲ್ಪ ಹೆಚ್ಚುಕಡಿಮೆ ಮಾಡಿದೆ. ಅದರಂತೆಯೆ ೨೨ನೆಯ ಪ್ರಕರಣವೊಂದನ್ನು ಇದರಲ್ಲಿ ಹೊಸತಾಗಿ ಸೇರಿಸಲಾಗಿದೆ. ಈ ಹೊಸ ಪ್ರಕರಣವನ್ನು ಏತಕ್ಕಾಗಿ ಸೇರಿಸಬೇಕಾಯಿತೆಂಬುದನ್ನು ವಿವೇಚಿಸುತ್ತ ಕುಳಿತು ಈ ಮುನ್ನುಡಿಯನ್ನು ದೊಡ್ಡದಾಗಿಸುವ ಅಪೇಕ್ಷೆ ನನಗಿಲ್ಲ. ಯಾವ ಕೊರತೆಯನ್ನು ತುಂಬಲು ಆ ಪ್ರಕಣದಲ್ಲಿಯ ವಿಷಯ ಬಂದಿದೆಯೆಂಬುದನ್ನು, ರಸಿಕ ವಾಚಕರು ಅರಿತುಕೊಳ್ಳಬಹುದು.

'ಸುದರ್ಶನ' ಕಾದಂಬರಿಯ ಮೊದಲನೆಯ ಮುದ್ರಣದ ಸಂದರ್ಭದಲ್ಲಿ ಪ್ರಿನ್ಸಿಪಾಲ್ (ಆಗ ಪ್ರೊಫೆಸರ್) ವಿ. ಕೆ. ಗೋಕಾಕ ಅವರು ವಿಸ್ತಾರವಾದ ಮುನ್ನುಡಿಯೊಂದನ್ನು ಬರೆದಿರುವರು. ಅದರಲ್ಲಿ ಈ ಕಾದಂಬರಿಯ ಗುಣಾವಗುಣಗಳನ್ನವರು ಚೆನ್ನಾಗಿ ವಿಶ್ಲೇಷಿಸಿ ಹೇಳಿರುವರು. ಈಗ—ನನ್ನ ಕೃತಜ್ಞತೆಯ ಸಲುವಳಿಯೊಂದಿಗೆ—ಈ ಕಾದಂಬರಿಯ ವಿಚಾರದಲ್ಲಿ ಅವರು ಅಂದು ಹೇಳಿದ ಮಾತುಗಳನ್ನು ಮತ್ತೆ ಇಲ್ಲಿ ಅವತರಿಸುತ್ತಲಿದ್ದೇನೆ:

“ ‘ ಸುದರ್ಶನ ’ ವು ಅಂದವಾದ ಒಂದು ಸಾಮಾಜಿಕ ಕಾದಂಬರಿಯಾಗಿದೆ. ಚಿಕ್ಕದಾದ ಕೃತಿಯಾದರೂ ಇದರಲ್ಲಿ ಹೊಸಹುಟ್ಟಿನ ಕುರುಹು ಬೆಳಗಿದೆ. ಮುಖ್ಯವಾಗಿ ಬೇಕಾಗಿರುವುದು ಸ್ಪಷ್ಟವಾದ, ಹೊಸತಾದ ಹುಟ್ಟು. ಈ ಹುಟ್ಟಿನ ಮಾರ್ಗವಾಗಿ ಒಂದು ಪರ್ವತಾವಳಿಯಲ್ಲಿ ಕಂಡುಬಂದ ಸೌಂದರ್ಯವು ಒಂದು ಸಣ್ಣ ಹೂವಿನಲ್ಲಿಯೂ ಕಂಡುಬರಬಹುದು. ಕಾದಂಬರಿಗಳಲ್ಲಿ ಮುಖ್ಯತಃ ಎರಡು ಜಾತಿಗಳನ್ನು ಕಾಣಬಹುದು. ಒಂದರಲ್ಲಿ ಸಾಹಿತಿಯು ಮುಗಿಲಿಗೆ ತಕ್ಕೆಬಿದ್ದು, ಧ್ಯೇಯಗಳ ವಿಶಾಲತೆಯನ್ನು ವ್ಯಕ್ತಪಡಿಸಲು, ಅವುಗಳಷ್ಟೇ ವಿಶಾಲವಾದ ಒಂದು ಭೂಮಿಕೆಯನ್ನು ಸಿದ್ಧಗೊಳಿಸುವನು. ಸಮಾಜದ ವಿಶಾಲಜೀವನ, ಐತಿಹಾಸಿಕ ಪುರುಷರ ಆವೇಶ, ಆದರ್ಶಪ್ರಾಯರಾದ ಪುರುಷ–ವನಿತೆಯರ ಬೆಡಗು, ದುರ್ಜನರ ದೊಂದಣಿ, ರಾಜ್ಯಗಳ ಏರಿಳಿತ, ದೈವದ ತಾಕಲಾಟ–ಇವೇ ಮೊದಲಾದ ಚಿತ್ರಗಳು ಆ ಭೂಮಿಕೆಯಲ್ಲಿ ಒಂದರ ಮೇಲೊಂದು ಉದಯಿಸುವುವು. ಆದರೆ ವ್ಯತ್ಯಯರಹಿತವಾದ ಆ ತತ್ತ್ವಗಳನ್ನೇ ಒಂದು ಸಣ್ಣ ಕಥಾವಸ್ತುವಿನಲ್ಲಿ ಅಷ್ಟೇ ಪರಿಣಾಮಕಾರಕವಾಗಿ ಬಿಂಬಿಸಿ ತೋರಿಸಬಹುದು. ಮೊದಲನೆಯ ಕೃತಿಯು ನಮ್ಮನ್ನು ಅಗಾಧಗೊಳಿಸಿದರೆ, ಎರಡನೆಯದು ನಮ್ಮನ್ನು ಸುಪ್ರಸನ್ನರನ್ನಾಗಿಮಾಡುವುದು. ಯಾವ ರೀತಿಯನ್ನು ಅನುಸರಿಸಬೇಕೆಂಬುದು ಸಾಹಿತಿಯ ಮಾನಸಿಕವೃತ್ತಿಯನ್ನು ಅವಲಂಬಿಸಿದ ಮಾತಾಗಿದೆ. ಶ್ರೀ. ಬೆಟಗೇರಿಯವರ ಗ್ರಂಥವು ಎರಡನೆಯ ಜಾತಿಗೆ ಸೇರಿರುವುದೆಂಬುದು ಸಹಜವಾಗಿ ಗೊತ್ತಾಗುವುದು.”

ವೈಷಮ್ಯ (Contrast) ವೇ ಈ ಕೃತಿಯ ಜೀವಾಳವೆಂದು ಹೇಳಬಹುದು. ಹ್ಯಾಮ್ಲೆಟ್ ಎಂಬ ನಾಟಕದ ನಾಯಕನು “Look on this picture and on that” (ಈ ಚಿತ್ರವನ್ನು ನೋಡು; ಆ ಚಿತ್ರವನ್ನು ನೋಡು!) ಎಂದು ತನ್ನ ತಂದೆಯ ಹಾಗೂ ಕಕ್ಕನ ಚಿತ್ರಗಳನ್ನು ತಾಯಿಗೆ ತಿಳಿಸಿ ಹೇಳಲು—ತೋರಿಸಿದನು. ‘ಸುದರ್ಶನ’ ದ ತಳದಲ್ಲಿ ಈ ರಚನಾಕ್ರಮವು ಅಡಕವಾಗಿದೆ. ಸುದರ್ಶನನ ಯೋಗ್ಯತೆಯನ್ನು ತಿಳಿಯಲು ನಾವು ಗಿರಿಧರನ ಚರಿತ್ರವನ್ನು ಅಭ್ಯಸಿಸಬೇಕು. ಪ್ರಭೆಯನ್ನು ಕಂಡು ಕನಿಕರಪಟ್ಟು, ಉಷೆಯನ್ನು ಕಂಡು ತಲೆದೂಗಬೇಕು. ಶಾಸ್ತ್ರಿಗಳ

ಪರಿಚಯದಿಂದ ಸಂತುಷ್ಟರಾಗಿ, ಅಪ್ಪಣರಾಯರನ್ನು ಗುರುತಿಸಿ ಮೆಲುನಗೆ ನಗಬೇಕು. ಹಾಗೆಯೇ ತಿರುಮಲರಾಯರನ್ನು ನೋಡಿ ಹಿರಿಯರೆಂದು ವಂದಿಸಬೇಕು. ಶಾರದಮ್ಮ, ಸರಸಮ್ಮ, ಕಮಲಮ್ಮ, —ಐಹಿಕ ಸುಖಗಳನ್ನು ಬೇರೆ ಬೇರೆ ವಿಧಾನಗಳಲ್ಲಿ ಕಾಣುವ—ಈ ಮಹಿಳೆಯರನ್ನು ಕಂಡು, ಇಂದಿನ ಆರ್ಯಸ್ತ್ರೀಸಮುದಾಯದ ಹೀನಸ್ಥಿತಿಗೆ ಮರುಗಿ, ಯಶೋದಮ್ಮನ ದೊಡ್ಡತೆಗೆ ತಲೆವಾಗಬೇಕು.

ಇದಲ್ಲದೆ ಗ್ರಂಥರಚನೆಯಲ್ಲಿ ಇನ್ನೊಂದು ಸೂಕ್ಷ್ಮವಾದ ಕಲ್ಪನೆಯಿದೆ. ಅದು ವಿಡಂಬನೆಯದಲ್ಲ, ಸರಸ ಸಜ್ಜನಿಕೆಯದು. ಅಧೋಗತಿಯನ್ನು ಕಂಡ ಗಿರಿಧರನನ್ನು ಲೇಖಕರು ತಿರಸ್ಕಾರದಿಂದ ಚಿತ್ರಿಸಿಲ್ಲ. ಮನೆಯಲ್ಲಿಯು ಹಾಗು ಸಮಾಜದಲ್ಲಿಯು ಯಾವ ಒಲವುಗಳು ಅವನನ್ನು ಈ ದುರವಸ್ಥೆಗೆ ತಂದುವೆಂಬುದನ್ನು ಇವರು ಹೃದಯಂಗಮವಾಗಿ ಬಣ್ಣಿಸಿದ್ದಾರೆ. “ ನೋಡು ! ಅವಂತಿಕೇ ! ನನ್ನ ಸೋದರಮಾವನ ಮಗಳೊಬ್ಬಳಿದ್ದಾಳೆ. ಆಕೆಯೂ ಸಂಗೀತವನ್ನು ಚೆನ್ನಾಗಿ ಬಲ್ಲಳು. ವಸಂತರಾಗವನ್ನು ಕೇಳಬೇಕು,—ಆಕೆಯ ಬಾಯಿಂದಲೇ ನೋಡು ! ” ಎಂದು ಗಿರಿಧರನು ಹೇಳುವಾಗ, ಆತನು ತನ್ನ ಹೆಂಡತಿಯಾದ ಪ್ರಭೆಯನ್ನು ತೊರೆದು, ಅವಂತಿಕೆಗೆ ಹೇಗೆ ಮರುಳಾದನೆಂಬುದು ಸಹಜವಾಗಿ ಗೋಚರವಾಗುವುದು. ಈ ಸಹಾನುಭೂತಿಪರ ಪಾತ್ರರಚನಾಕ್ರಮವನ್ನು ಕಾದಂಬರಿಯಲ್ಲಿಯ ಉಳಿದ ಅನುದಾತ್ತ ವ್ಯಕ್ತಿಗಳಲ್ಲಿಯೂ ಕಾಣಬಹುದು.

ಅಲ್ಲದೆ ಲೇಖಕರ ಸಹಾನುಭೂತಿಯಲ್ಲಿ ಒಂದು ದುಗುಡವು ನಸುವೆ ಬೆರೆತುಕೊಂಡಿದೆ. ಗಿರಿಧರ ಮುಂತಾದವರ ಬಾಳು ಹೀಗೇಕಾಗಬೇಕು ? ನೀತಿಯ ಮಾರ್ಗವನ್ನು ತುಳಿಯಹಚ್ಚುವ ಪ್ರಸಂಗಗಳು ಅವರಿಗೇಕೆ ಬರಬಾರದಾಗಿತ್ತು? ಅದು ಹೋಗಲಿ ! ಶಾಸ್ತ್ರಿಗಳಂಥ ಸಜ್ಜನರಿಗೆ ಕುಟುಂಬ-ಸೌಖ್ಯವನ್ನು ದೇವರು ಸಲ್ಲಿಸದೆ ಇರಬೇಕೆ ? ಯಶೋದಮ್ಮನವರಂಥ ಸತೀಮಣಿಯರಿಗೆ ಮಗನ ದುರಾಚಾರದ ಪಾಪಗ್ರಹವು ಬಡಿದುಕೊಳ್ಳಬೇಕೆ ? ತಿರುಮಲರಾಯರಿಗೆ ಕಮಲಮ್ಮನವರಂಥ ಪತ್ನಿಯೇಕೆ ?—ಇವೇ ಮೊದಲಾದ ಪ್ರಶ್ನೆಗಳನ್ನು ಅವರು ನಮ್ಮ ವಿಚಾರಪಥದಲ್ಲಿ ತಂದೊಡ್ಡಿದ್ದಾರೆ.

ಆದರೆ ಅವರ ಮನಸ್ಸನ್ನು ತಟ್ಟಿದ ಈ ಚಿಂತೆಯು ಅಷ್ಟು ವ್ಯಾಪ್ತಿಯನ್ನು ಪಡೆದಿಲ್ಲವೆಂದು ಹೇಳಬಹುದು.

ಉಷಾ-ಸುದರ್ಶನರ ಸಮಸ್ಯೆಯನ್ನು ಅವರು ಬಿಡಿಸದಿರುವುದು ಅರ್ಥಪೂರ್ಣವಾಗಿದೆ. ಈ ಕಾದಲರನ್ನು ಕಳವಳಗೊಳಿಸಿದ ತಾಪಗಳೇನೋ ಅವರ ಮನಸ್ಸನ್ನು ನೋಯಿಸಿವೆ. ಸುದರ್ಶನನು ದೀನಾನಂದನಾಗಿ, ತನ್ನ ಆಶ್ರಮಧರ್ಮವನ್ನು ಕಡೆತನಕ ಪಾಲಿಸುವನೆಂಬುದೂ ಅವರ ಗ್ರಂಥದಲ್ಲಿ ಸೂಚ್ಯವಾಗಿದೆ. ಇದರಲ್ಲಿ ಅಸಂಭವವಾದುದೇನೂ ಇಲ್ಲ. ಮೊದಲಿನಿಂದಲೂ ಧ್ಯೇಯವಾದಿಯಾದ ಸುದರ್ಶನನು, ಉಷೆಯ ವಿಷಯವಾಗಿ ತಾಳಿದ ಪ್ರೀತಿಯಲ್ಲಿ ಗುರುವಿನ ವಾತ್ಸಲ್ಯವು ಬೆರೆತುಕೊಂಡಿತ್ತು. ಸೀತೆಮನೆಯ ಆಶ್ರಮದಲ್ಲಿ— ಅವರು ಮುಂದೆ ಕೆಲವು ದಿನ ಕೂಡಿದ್ದಾಗ—ವ್ರತಸ್ಥನಾದ ಸುದರ್ಶನನಲ್ಲಿ ಈ ವಾತ್ಸಲ್ಯವೇ ಹೆಚ್ಚಾಗಿ ಬೆಳೆದು, ತನ್ನಂತಹ ಉಜ್ವಲ ತರುಣನೊರ್ವನನ್ನು ಕಂಡುಕೊಂಡು, ಅವನೊಡನೆ ಉಷೆಯ ವಿವಾಹ ವನ್ನು ಸಾಂಗಗೊಳಿಸಲು ಸುದರ್ಶನನು ಸಹಾಯವಾಗಿರಬಹುದು. ಇಲ್ಲವೆ ಉಷೆಯಂತಹ ಪತ್ನಿಯ ಪ್ರೇಮದಿಂದ ತನ್ನ ಕಾರ್ಯವು ವೃದ್ಧಿಂಗತವಾಗು ವುದಲ್ಲದೆ ಕುಂದದೆಂದು ಸುದರ್ಶನನು ಕಾಲಾಂತರದಲ್ಲಿ ಕಂಡುಹಿಡಿದು, ಉಷೆಯನ್ನು ಮದುವೆಯಾಗಿರಬಹುದು. ಏನೇ ಇರಲಿ, ವಿವಾಹವುಂಟಪ ದಲ್ಲಿ ಮುಗಿಯದಿರುವ ಈ ಕೊನೆಯ ಭಾಗದಲ್ಲಿ ಒಂದು ಹೊಸತನವು ತೋರುವುದಿಲ್ಲವೆ ? ಯಾವ ದೃಷ್ಟಿಯಿಂದಾದರೂ ಸರಿ, ಉಷೆಯ ಭವಿತವ್ಯ ತೆಯು ಭವ್ಯವಾಗಿರುವುದರಲ್ಲಿ ಸಂಶಯವಿಲ್ಲ. ಕನ್ನೆಯಾಗುಳಿದು ದೇಶಸೇವೆ ಯಲ್ಲಿ ದೇಹವನ್ನು ಅವಳು ಸವೆಯಿಸಿದಳೆಂಬ ಮಾತನ್ನು ಸಹ ಉಷೆಯ ವಿಷಯಕ್ಕಿದ್ದ ನಮ್ಮ ಭರವಸೆಯು ಸಂಭವನೀಯವಾಗಿ ಮಾಡುತ್ತದೆ. ಅವಳು ಸರ್ವಸಾಧಾರಣಳಾದ ದೇಶಸೇವಿಕೆಯಲ್ಲ; ಒರ್ವ ಆದರ್ಶ ಸ್ತ್ರೀ. ಇವೆಲ್ಲ ನಮ್ಮ ವಿಚಾರಗಳು; ಆದರೆ ಕಾದಂಬರಿಯ ಮಟ್ಟಿಗೆ ಅವಳು ‹‹ ಕರುಣಾರಸಪ್ರಧಾನವಾದ ಕಥೆಯ ನಾಯಿಕೆ ''ಯಾಗಿದ್ದಾಳೆ. ಈ ತಮ್ಮ ಉದ್ದೇಶವು ಕಥೆಯು ಮುಗಿದಲ್ಲಿಗೆ ಸಾಧಿಸಿ ಹೋಗಿರುವುದರಿಂದ, ಅವಳ ಭವಿತವ್ಯತೆಯನ್ನು ಕುರಿತು ಲೇಖಕರು ವಿಚಾರವನ್ನೆತ್ತದಿರುವುದು ದೋಷವಾಗಲಾರದೆಂದು ನಾನು ನಂಬಿದ್ದೇನೆ.

ಅನೇಕ ಸುಂದರಚಿತ್ರಗಳು ಈ ಪುಟ್ಟ ಕತೆಯಲ್ಲಿ ಕಂಡುಬರುವುವು. ಅವುಗಳಲ್ಲಿ ಮೂರನೆಯ ಅಧ್ಯಾಯದಲ್ಲಿ ವಿದಿತವಾದ ಅಪ್ಪಣರಾಯರ ಚಾರಿತ್ರ್ಯವೊಂದು. ಶ್ರೀ. 'ಆನಂದಕಂದ'ರ ಸರಳಶೈಲಿಯ ಮೋಹ ಕತೆಯ ಬಗ್ಗೆ ನಾನೇನು ಹೆಚ್ಚಿಗೆ ಬರೆಯಬೇಕಾಗಿಲ್ಲ. ಅವರ ಸಣ್ಣ ಕತೆಗಳನ್ನು ಓದಿದವರಿಗೆ ಅದರ ಪರಿಚಯವಿರಬಹುದು. ಕಥೆಯ ಬಹುತರ ಭಾಗವೆಲ್ಲ ಸಂಭಾಷಣೆಯ ರೂಪದಲ್ಲಿದೆ. ಇದೊಂದು ಸಣ್ಣದಾದ ನಾಟಕವಾದರೂ ಆಗಬಹುದಾಗಿತ್ತು; ಆದರೆ ನಾಟಕವಿದ್ದರೆ ಈಗ ನಡುವೆ ಬರುವ ಕೆಲವು ಅಂದವಾದ ವರ್ಣನೆಗಳು ಲಯವಾಗಿ ಹೋಗುತ್ತಿದ್ದುವು."

ಈ ಕಾದಂಬರಿಯ ೨ನೆಯ ಮುದ್ರಣ ಬೆಳಕಿಗೆ ಬರಲು ಅನುಕೂಲವಾದ ಪ್ರೋತ್ಸಾಹವನ್ನಿತ್ತ ನನ್ನ ಗೆಳೆಯರಿಗೂ ಅಂದವಾಗಿ ಮುದ್ರಿಸಿ ಕೊಟ್ಟ—ಕರ್ನಾಟಕ ಪ್ರಿಂಟಿಂಗ್ ವರ್ಕ್ಸಿನ ಸಂಚಾಲಕರಾದ ಶ್ರೀಮಾನ್ ಜಠಾರ ವಿಟ್ಠಲರಾಯರಿಗೂ ಕೃತಜ್ಞತೆಯ ವಂದನೆಗಳು.

ಧಾರವಾಡ
ತಾ॥ ೨೫-೪-೧೯೪೧

'ಆನಂದಕಂದ'

# ಇದೇ ಲೇಖಕರ ಬೇರೆ ಗ್ರಂಥಗಳು

| | | | |
|---|---|---|---|
| ಮುದ್ದಣ ಮಾತು | .. | .. | ( ಕವನಸಂಗ್ರಹ ) |
| ಅರುಣೋದಯ | .. | .. | ( ,, ) |
| ವಿರಹಿಣಿ .. | .. | .. | ( ,, ) |
| ರಾಜಯೋಗಿ | .. | .. | ( ಐ. ಕಾದಂಬರಿ ) |
| ಅಶಾಂತಿಪರ್ವ | .. | .... | ( ,, ) |
| *ಬಡತನದ ಬಾಳು | .. | .. | ( ಕಥಾಸಂಗ್ರಹ ) |
| ಸಂಸಾರಚಿತ್ರ | .. | .. | ( ,, ) |
| ನಮ್ಮ ಬದುಕು | .. | .. | ( ,, ) |
| ಕರ್ನಾಟಕ ಜನಜೀವನ | | .. | ( ಸಂಶೋಧನ ಗ್ರಂಥ ) |
| *ಹಳ್ಳಿಗರ ಹಾಡು | .. | | ( ವಿಮರ್ಶಾತ್ಮಕ ಪ್ರಬಂಧ ) |
| ಶ್ರೀಬಸವಣ್ಣನವರು | .. | .. | ( ಮಕ್ಕಳಿಗಾಗಿ ಚರಿತ್ರೆ ) |
| ಭಾವಗೀತ .. | | .. | ( ದಾಸ-ಶರಣರ ಗೀತಸಂಗ್ರಹ ) |

*** ಈ ಗುರುತು ಹಾಕಿದ ಪುಸ್ತಕಗಳು ಎರಡನೆಯ ಸಲ ಅಚ್ಚಾಗುತ್ತಲಿವೆ.**

# ಸುದರ್ಶನ

## ೧ನೆಯ ಪರಿಚ್ಛೇದ

"ಪ್ರಭಾ, ಶಾಸ್ತ್ರಿಗಳು ಬರಲಿಲ್ಲವೇಕೋ ಇನ್ನೂ!"

"ಬರದಿದ್ದರೆ ಚೆನ್ನಾಯಿತು ಬಿಡೇ! ಸೊಗಸಾಗಿ ಹರಟೆ ಹೊಡೆಯುತ್ತಾ ಕಾಲಕಳೆಯೋಣ! ಹಾಳು; ಸಂಗೀತವೆಂದರೆ ನನಗೆ ತಲೆ-ಬೇಸರು!"

"ಇದನ್ನೇನು ಮಾತನಾಡುತ್ತೀಯೇ? ಹಾಳು ಸಂಗೀತವೇ? ಸಂಗೀತವೆಂದರೆ ಏನೆಂದು ತಿಳಿದಿರುತ್ತೀ? ಅಂದೊಮ್ಮೆ ಸುದರ್ಶನ ಹೇಳಿದ್ದ; ಆ ಮಾತು ನೆನಪಿನಲ್ಲಿಲ್ಲವೆ? ಸಂಗೀತವೆಂದರೆ, ಸಂಸಾರದ ಕಟುಅನುಭವದ ಕಹಿಯನ್ನು ಕಳೆಯುವುದಕ್ಕೆಂದು ರಸವತಿಯಾದ ಶಾರದೆಯು ಸೃಜಿಸಿದ ಸುಧಾರಸವಂತೆ! ಮಾನವರ ಮನಸ್ಸೆಂಬ ಮುದ್ದುಮಕ್ಕಳನ್ನು ಮಲಗಿಸುವುದಕ್ಕೆ ಚೆಲುವುದೇವಿಯು ಹೇಳಬೇಕಾದ ಜೋಗುಳವಂತೆ! ಪರಮಾತ್ಮನ ಮೋಹಿನೀರೂಪದ ನಗೆ-ಮೊಗದ ಉಲ್ಲಾಸದ ಉಸಿರಂತೆ!"

"ಉಷಾ! ನಿನಗೆ, ನಿನ್ನ ಸುದರ್ಶನನಿಗೆ ಅದು ಸುಧಾರಸವಾಗಿ ತೋರಿರಬಹುದು. ನನಗೆ, ಮಾತ್ರ ಅದು ಬೇವಿನ ರಸ! ನಿನ್ನ ಚೆಲುವು-ದೇವಿಯ ಜೋಗುಳ ನನಗೆ ತಲೆನೋವನ್ನು ಹೆಚ್ಚಿಸುವುದೇಕೆ?"

"ಸರಿಯಮ್ಮಾ, ನೀನು ಔರಂಗಜೇಬನ ಕಾಲದಲ್ಲಿ ಹುಟ್ಟಿದ್ದರೆ ಚೆನ್ನಾಗುತ್ತಿದ್ದಿತು; ಖಂಡಿತವಾಗಿಯೂ ಆತ ನಿನ್ನನ್ನು ಪಟ್ಟದ ರಾಣಿ

ಯನ್ನಾಗಿ ಮಾಡಿಕೊಳ್ಳುತ್ತಿದ್ದ; ಭರತಖಂಡದ ಮಹಾರಾಜ್ಞಿಯಾಗಿ ಮೆರೆಯುತ್ತಿದ್ದೆ ! ''

" ಏನೇ ಉಷಾ, ಒಂದು ಮಾತು ; ಈಗೇನೋ ಬೇಕುಬೇಕಾದ ಹಾಗೆ ನಯವಾದ-ನಾಜೋಕಾದ ಬಟ್ಟೆಗಳು ಸೀಮೆಯಿಂದ ಬರುತ್ತವೆ ; ಉಟ್ಟುತೊಟ್ಟು ಬೆಡಗುಮಾಡಬಹುದು. ಹಿಂದಿನಕಾಲದ ಮಹಾರಾಣಿ ಯರಿಗಾದರೂ ಇಂದಿನ-ನಮ್ಮಂತಹ-ಬಟ್ಟೆಗಳು ಸಿಕ್ಕುತ್ತಿದ್ದುವೋ ಇಲ್ಲವೋ ! "

" ಇಂತಹ ಬಟ್ಟೆಗಳು ಆಗ ಅವರಿಗೆ ಎಲ್ಲಿಂದ ದೊರೆಯ ಬೇಕಮ್ಮಾ ! "

" ದೇವರು ನನ್ನನ್ನು ಈ ಕಾಲದಲ್ಲಿ ಹುಟ್ಟಿಸಿದ್ದಾನೆ, ಒಳ್ಳೆಯ ದಾಯಿತು. ಹಿಂದಿನ ಕಾಲದಲ್ಲಿ ಆತನು ನನ್ನನ್ನು ಪಟ್ಟದ ರಾಣಿಯನ್ನಾಗಿ ಹುಟ್ಟಿಸುವೆನೆಂದರೂ ನಾನು ಸಮ್ಮತಿಸುತ್ತಿದ್ದಿಲ್ಲ ನೋಡು ಉಷಾ ! ''

ಉಷೆಯು ಒಂದುಸಲ ಉಪೇಕ್ಷೆಯ ನಗೆ ನಕ್ಕಳು ; ಮಾತನೇನೂ ಆಡಲಿಲ್ಲ.

ಕಿರುಮನೆಯೊಂದರಲ್ಲಿ ಹಾಸಿದ್ದ ರತ್ನಗಂಬಳಿಯ ಮೇಲೆ ಕುಳಿತು, ಉಷಾ ಪ್ರಭಾ ಮಾತನಾಡುತ್ತಿದ್ದರು. ಅಲ್ಲಿದ್ದ ಒಡವೆಗಳನ್ನೆಲ್ಲ ಓರಣ ವಾಗಿ ಇರಿಸಲಾಗಿದ್ದಿತು. ಬಾಗಿಲ ಎದುರಿನ ಗೋಡೆಗೆ ಹೊಂದಿ ಒಂದು ಕನ್ನಡಿಯ ಕಪಾಟು ; ಅದರ ತುಂಬ ಅಚ್ಚುಕಟ್ಟಾಗಿ ಇಟ್ಟ ಪುಸ್ತಕಗಳು. ಅಲ್ಲಿಯೆ ಮೂಲೆಯಲ್ಲಿ ಮುಸುಕುಹಾಕಿಕೊಂಡು ಕುಳಿತ ವೀಣೆಯು, ವಿನ ಯದ ಮರೆಯಲ್ಲಿ ವಿದ್ಯೆಯನ್ನಡಗಿಸಿಕೊಂಡು ಕುಳಿತ ಪಂಡಿತನಂತೆ ಒಪ್ಪು ತ್ತಿದೆ. ಕಪಾಟಿನ ಮುಂದುಗಡೆಯ ಮೇಜಿನ ಮೇಲೆ, ಬಣ್ಣದಿಂದ ಬರೆದ ಚದುರಂಗದಾಟದ ಪಟ್ಟವಿದೆ. ಪರಮಾತ್ಮನ ಅದೃಶ್ಯಕಾರ್ಯವನ್ನು ಮಾನವನು ದೃಶ್ಯರೂಪದಲ್ಲಿ ಮಾಡಿತೋರಿಸುವ ಸಾಧನವಾದ ಚದು-ರಂಗದ ಕಾಯಿಗಳು-ತೇರಾನೆ ಕುದುರೆಕಾಲಾಳುಗಳು-ವೀರೋಚಿತವಾದ ಸ್ವರ್ಗಸೌಖ್ಯವನ್ನನುಭವಿಸುತ್ತಿರುವುವೇನೋ ಎಂಬಂತೆ, ಅಂದವಾದ ಪೆಟ್ಟಿಗೆಯೊಂದರಲ್ಲಿ ತಮ್ಮ ಮನಸ್ಸಿಗೆ ಬಂದ ಹಾಗೆ ಬಿದ್ದುಕೊಂಡಿವೆ. ಉಷೆಯ ಎದುರು-ಹೇಳಿದ ಕೆಲಸವನ್ನು ಮಾಡಲು ಕೈಕಟ್ಟಿ ಕುಳಿತ

ಊಳಿಗದಾಳಿನಂತೆ– ಹೊಚ್ಚಹೊಸತಾದ– ತೆರೆದಿಟ್ಟಿದ್ದ– ' ಹಾರ್ಮೋನಿಯಮ್ ' ಒಡತಿಯ ಆಜ್ಞೆಯನ್ನು ಕಾಯುತ್ತಿದೆ.

ಸಂಗೀತಶಾಸ್ತ್ರಿಗಳು ನಿನ್ನೆ ಹೇಳಿಕೊಟ್ಟು ಹೋಗಿದ್ದ ಆನಂದ-ಭೈರವಿಯ ರಾಗಾಲಾಪನೆಯ ಅಭ್ಯಾಸಮಾಡಬೇಕೆಂದು ಉಷೆಯು ಕುಳಿತಿರುವಾಗಲೆ ಪ್ರಭೆಯೂ ಅಲ್ಲಿಗೆ ಬಂದಿದ್ದಳು. ಅದೆಷ್ಟೋ ವೇಳೆಯ ವರೆಗೆ ಅವರ ಮಾತುಕತೆ ನಡೆದಿದ್ದಿತು. ಮೇಲೆ ಹೇಳಿದ ಸಂಭಾಷಣವು ಅವರ ಮಾತಿನ ಕೊನೆಯ ಭಾಗ.

ಉಷೆ–ಪ್ರಭೆಯರಿಬ್ಬರೂ ಸರಿವರಯದವರು ; ವಿದ್ಯಾವ್ಯಾಸಂಗ-ಸಂಗೀತವ್ಯಾಸಂಗಗಳೆರಡರಲ್ಲಿಯೂ ಜೊತೆಗಾತಿಯರು. ಆದರೇನು ! ಊದುವ ಬಾಯಿ ಒಂದೇ ಆದರೂ ಆ ಉಸಿರು. ಕೊಳಲಿನಲ್ಲಿ ಇಂಚರವನ್ನು ಹೊರಡಿಸುವುದು ; ಊದುಗೊಳವೆಯಲ್ಲಿ ಇದ್ದಕ್ಕಿದ್ದ ಹಾಗೆಯೆ ಗಾಳಿಯ ಕೂಡ ಗಾಳಿಯಾಗುವದು. ಉಷೆ ಪ್ರಭೆಯರ ವ್ಯಾಸಂಗದ ಬಗೆ ಇದೇ ತೆರನಾದುದು. ಉಷೆಯ ಸಂಸ್ಕಾರವು ತಿಂಗಳ ಬೆಳಕಿನಂತಹದು. ಪ್ರಭೆಯ ಸಂಸ್ಕಾರವು ಮಿಣುಕುಹುಳುವಿನ ಮೆರುಗಿನಂತಹದು. ಪ್ರಭೆಯೂ ಮಾತನಾಡಿದಳು :

" ನನಗೆ ಸಂಗೀತವೆಂದರೆ ಬೇಸರು ! ನಮ್ಮ ತಾಯಿಯ ಬಲವಂತ ಸಂಗೀತ ಕಲಿಯಲೇ ಬೇಕೆಂದು. ಓದು ಬರೆಹ ಕಲಿತರೆ—ಇನ್ನೂ ಕಥೆ ಕಾದಂಬರಿ ಓದಿ, ಮನೋರಂಜನವನ್ನಾದರೂ ಮಾಡಿಕೊಳ್ಳಬಹುದು. ಸಂಗೀತದಲ್ಲಿ ಏನು ಸ್ವಾರಸ್ಯವೊ ನಾನು ಬೇರೆ ಕಾಣೆ. ಈ ಬಲವಂತದ ಮಾಘಸ್ನಾನ ಎಂದಿಗೆ ತಪ್ಪುವುದೋ !. . . . "

ಪ್ರಭೆಯೂ ಮಾತನಾಡುತ್ತಿರುವಾಗಲೆ ಸಂಗೀತಶಾಸ್ತ್ರಿಗಳು ಕಿರುಮನೆಯನ್ನು ಪ್ರವೇಶಿಸಿದರು. ಸೂರ್ಯೋದಯದ ಕಮಲ-ಕುಮುದಗಳಂತೆ ಉಷೆ ಪ್ರಭೆಯರ ಮುಖಗಳು ಕಂಡುವು.

ಸಂಗೀತಶಾಸ್ತ್ರಿಗಳು ತುಂಬ ಓರಣವಂತರೆಂಬುದನ್ನು ಅವರ ಉಡಿಗೆತೊಡಿಗೆ ಸಾರಿ ಹೇಳುತ್ತಿದ್ದಿತು. ಸಂಸ್ಕಾರವಂತರೆಂಬುದನ್ನು ಮುಗುಳುನಗೆಯ ಮೊಗವು ಕೈಮಾಡಿ ತೋರಿಸುತ್ತಿದ್ದಿತು. ಅವರು ಉಟ್ಟುದು ಸೂಜಿಯಂಚಿನ ಶುಭ್ರವಾದ ಪಂಚೆ; ಮೈಯಲ್ಲಿ ಬೆಳುವಕ್ಕಿಯ

ಬಣ್ಣದ ಷರ್ಟು; ಅದರ ಮೇಲೆ ಕತ್ತನ್ನು ಬಳಸಿಕೊಂಡು ಹಿಂಗಡೆಗೆ ಮುಂಗಡೆಗೆ ಜೋಲಾಡುತ್ತಿರುವ–ಜರಿಯಂಚಿನ–ರೇಶಿಮೆಯ ಸೆಲ್ಲೆಯು; ನಲವತ್ತು ನಲವತ್ತೈದು ವರುಷದ ವಯಸ್ಸಿನವರಾದರೂ ಮೂವತ್ತು ವರುಷದವರೆಂಬ ಭ್ರಾಂತಿಯನ್ನು ಹುಟ್ಟಿಸುವ ಕಪ್ಪಾದ ತಲೆಗೂದಲು; ಅಂದವಾಗಿ ಬಾಚಿ ತೆಗೆದ ಬೈತಲು, ಬಲಗೈಯ ಅನಾಮಿಕೆಯಲ್ಲಿ–ಚಿಕ್ಕದಿದ್ದರೂ ಹೊಳಪನ್ನು ಹರಡುತ್ತಿರುವ–ಒಂದು ಹರಳುಂಗುರ. ನಡುಹಣೆಯ ಸಾದಿನ ಬೊಟ್ಟು ಮುಖದ ಚೆಂಬಣ್ಣದಲ್ಲಿ ಎದ್ದುಕಾಣುವುದು. ಕಳೆಯುಳ್ಳ ಕಣ್ಣುಗಳು ಹೊರನೋಟಕ್ಕಿಂತ ಒಳನೋಟವನ್ನೇ ಹೆಚ್ಚು ಅಪೇಕ್ಷಿಸುವಂತಿವೆ. ಅದರೊಡನೆಯೆ ಆ ಜೀವಿಯ ಯಾವುದೋ ಒಂದು ನಿರಾಶೆಯ ಭಾವವನ್ನೂ ಹೊರಕ್ಕೆ ಹಾಕುತ್ತಲಿವೆ.

ಉಷೆಯು ಶಾಸ್ತ್ರಿಗಳನ್ನು ಆದರಿಸಿ ಕುಳ್ಳಿರಿಸಿದಳು. ಪ್ರಭೆಯು ಬೇಸರದ ವಿನಯದಿಂದ ಮೈ ಕೈ ಸರಿಮಾಡಿಕೊಂಡು ಕುಳಿತಳು. ಉಷೆಯು ತಾನೂ ಕುಳಿತುಕೊಂಡು ಸಂಭ್ರಮಭಾವದಿಂದ ಕೇಳಿದಳು:

"ತಡೆಯಾಯಿತಲ್ಲವೇ ಇಂದು?"

"ಆಯಿತು ಬಿಡಮ್ಮಾ!" ಮುಖಮುದುರಿಸಿ, ಬೇಸತ್ತವರಾಗಿ ಶಾಸ್ತ್ರಿಗಳು ಮಾತನಾಡಿದರು.

"ಇದೇನು? ಮಾತಿನಲ್ಲಿ ಬೇಸರು ಬೆರೆತುಕೊಂಡಿದೆಯಲ್ಲ?" ಉಷೆಯು ಕುತೂಹಲದ ನಗೆ ನಗುತ್ತ ಮೆಲ್ಲಗೆ ಕೇಳಿದಳು.

"ಏನು ಮಾಡುತ್ತೀ ಬಿಡು ತಾಯಿ, ನನ್ನ ಜನ್ಮ! ಮನುಷ್ಯನಿಗೆ ಸಮಾನಸಂಸ್ಕಾರದ ಒಡನಾಡಿಗಳು ಇಲ್ಲದಿದ್ದರೆ ಏನಿದ್ದರೂ ಬಾಳುವೆ ವ್ಯರ್ಥನೋಡು, ಸಂಸಾರದಲ್ಲಿ ಸ್ವಲ್ಪವೂ ಸ್ವಾರಸ್ಯವಿರುವುದಿಲ್ಲ! ಎತ್ತು ಎರೆಗೆ ಎಳೆದರೆ ಕೋಣ ಕೆರೆಗೆ ಎಳೆದಂತೆ ನಮ್ಮ ಬಾಳು! ದೇವರು ನಿಮಗಾದರೂ ಒಳ್ಳೆಯ ಒಡನಾಟ ಕೊಟ್ಟು ಸುಖದಿಂದಿರಿಸಲಮ್ಮಾ!" ಉಸಿರ್ಗರೆಯುತ್ತ ಶಾಸ್ತ್ರಿಗಳು ಮಾತನಾಡಿದರು. ಪ್ರಭೆಯು ಕುಳಿತಂತೆಯೆ ಕುಳಿತಿದ್ದಳು, ಉಷೆಯ ಮುಖದ ಮೇಲೆ ಮಾತ್ರ ಮರುಕವು ಮೊಗದೋರಿದ್ದಿತು. ಶಾಸ್ತ್ರಿಗಳು ಮತ್ತೆ ಮಾತನಾಡಿದರು:

"ಎಲ್ಲಿ ಪ್ರಭಾ! ನಿನ್ನೆಯ ಪಾಠವನ್ನು ಗಟ್ಟಿ ಮಾಡಿದ್ದೀಯಾ?"

"ಊಹೂಂ, ಇಲ್ಲ! ಆ ರಾಗದ ಸ್ವರಮಾಲಿಕೆಯೇ ಜ್ಞಾಪಕದಲ್ಲಿ ಉಳಿಯಲಿಲ್ಲ. ಹಾಗೂ ನನಗೆ ಸಮಯವೂ ಸಿಕ್ಕಲಿಲ್ಲವೆನ್ನಿ!"

ಶಾಸ್ತ್ರಿಗಳು ನಿರಾಶೆಯಿಂದ ಮೂಗನ್ನು ಮುದುರಿಸಿದರು; ಪ್ರಶ್ನಾತುರದೃಷ್ಟಿಯಿಂದ ಉಷೆಯ ಕಡೆಗೆ ನೋಡಿದರು. ಉಷೆಯು ಮೆಲ್ಲಗೆ ಕೇಳಿದಳು:

"ನಾನು ಒಪ್ಪಿಸಲೇ ನನ್ನ ಪಾಠವನ್ನು?"

"ಆಗಲಮ್ಮಾ!"

"ಮೊದಲು ಹಾರ್ಮೋನಿಯಮಿನಲ್ಲಿ ನುಡಿಸಲೋ, ಬಾಯಿಂದ ಹೇಳಲೋ?"

"ಹಾರ್ಮೋನಿಯಮಿನಲ್ಲಿಯೇ ನುಡಿಸು ಮೊದಲು!"

ಉಷೆಯು ನುಡಿಸಲು ತೊಡಗಿದಳು. ನಿಡಿದಾದ-ಕೋಮಲವಾದ ಕರಾಂಗುಲಿಗಳನ್ನು ಕಾಲ-ಕ್ರಮಗಳನ್ನರಿತು ಸ್ವರಸ್ಥಾನಗಳ ಮೇಲೆ ಇರಿಸುತ್ತ, ಕರ್ಣಮಧುರವಾಗಿ ಆನಂದಭೈರವಿಯ ಆಲಾಪನೆಯನ್ನು ಮಾಡಿ, ಆ ಚೇತನಾರಹಿತವಾದ ಪೆಟ್ಟಿಗೆಯನ್ನು ಸಚೇತನವಾಗಿ ಮಾಡಿ ತೋರಿಸಿದಳು. ಶಾಸ್ತ್ರಿಗಳ ಹೃದಯದ ಹಿಗ್ಗು, ಮೊದಲಿದ್ದ–ಮೊಗದ ಮೇಲಿನ–ಖಿನ್ನತೆಯನ್ನು ಹೊಡೆದೋಡಿಸಿತು; ಪ್ರಸನ್ನತೆಯಾಗಿ ಕಣ್ಣಾಲ್ಲಿ ಅರಳಿಕೊಂಡು ನಿಂತಿತು.

"ಚೆನ್ನಾಗಿ ಅಭ್ಯಾಸವಾಗಿದೆಯಮ್ಮಾ! ಬಾಯಿಂದ ಹೇಳು ನೋಡೋಣ!"

ಉಪಾಧ್ಯಾಯರ ಮೆಚ್ಚುಗೆಯಿಂದ ಹುಮ್ಮಸುಗೊಂಡಿದ್ದ ಉಷೆಯು, ಹಾರ್ಮೋನಿಯಮಿಗಿಂತ ಹೆಚ್ಚು ಶುದ್ಧವಾದ ಸ್ವರ-ಸಮ್ಮೇಳನ ನೈಪುಣ್ಯವನ್ನು ಕಂಠದಲ್ಲಿ ತೋರಿಸಿದಳು. ಶಾಸ್ತ್ರಿಗಳು ತಲೆದೂಗುತ್ತ ಕೇಳುತ್ತಲಿದ್ದರು. ಪ್ರಭೆಯು 'ಇದರಲ್ಲಿ ಏನಿದೆ ಹುರುಳು?' ಎಂಬ ಉಪೇಕ್ಷೆಯಿಂದಲೂ 'ಹುಚ್ಚನಂತೆ ಇವನೆಷ್ಟು ತಲೆದೂಗುತ್ತಿದ್ದಾನಲ್ಲ!' ಎಂಬ ಜುಗುಪ್ಸಾಭಾವದಿಂದಲೂ ಒಮ್ಮೆ ಉಷೆಯ ಕಡೆಗೆ, ಇನ್ನೊಮ್ಮೆ ಶಾಸ್ತ್ರಿಗಳ ಕಡೆಗೆ ನೋಡುತ್ತ ಕುಳಿತುಕೊಂಡಿದ್ದಳು. ಇವೆರಡರ ಹೊರತಾಗಿ ಬೇರೆಭಾವಗಳ ಸುಳಿದಾಟವು ಅವಳೆದೆಯನ್ನಾಗ ಸೋಂಕಿರಲಿಲ್ಲವೆಂದು ಸ್ಪಷ್ಟವಾಗಿ ಹೇಳಬಹುದು.

ಉಷೆಯು ಪಾಠ ಒಪ್ಪಿಸುವುದು ಕೊನೆಗಂಡಿತು. ಶಾಸ್ತ್ರಿಗಳು ಬಗೆಬಗೆಯಾಗಿ ತಮ್ಮ ಮೆಚ್ಚಿಕೆಯನ್ನು ಸೂಚಿಸಿದರು ; ಒಳಿಕ ಮಾತ ನಾಡಿದರು :

" ಇಂದು ಹೊಸಪಾಠ ಬೇಡ, ನನಗೆ ಬೇರೆ ಕೆಲಸಗಳಿದ್ದುದರಿಂದ ಇನ್ನೆಲ್ಲಿಗೋ ಹೋಗಬೇಕಾಗಿದೆ."

ಪ್ರಭೆಗೆ ಹೊಸಜೀವ ಬಂದಂತಾಯಿತು. ಔತನಕೊಟ್ಟು ಕರೆ ಯಿಸಿಕೊಂಡಂತೆ ಮೊಗದ ಮನೆಗೆ ಮುಗುಳುನಗೆಯು ಆಗಮನ ವಾಯಿತು. ಬಾಯಿಂದ ಮಾತೊಂದು ಹೊರಕ್ಕೆ ಬಂದಿತು :

" ಆಗಲಿ ಶಾಸ್ತ್ರಿಗಳೇ ! ನಾಳೆಗೆ ನಾನೂ ನನ್ನ ಪಾಠ ಗಟ್ಟಿಮಾಡಿ ತೋರಿಸುತ್ತೇನಂತೆ."

" ಹಾಗೇ ಆಗಲಮ್ಮಾ ! " ಎಂದು ಹೇಳುತ್ತಲೆ ಶಾಸ್ತ್ರಿಗಳು ಮೇಲಕ್ಕೆದ್ದರು. ಉಷೆ ಪ್ರಭೆಯರೂ ಅವರನ್ನು ಕಳುಹಲಿಕ್ಕೆಂದು ಹೊರಬಾಗಿಲ ವರೆಗೆ ಬಂದರು. ಕುಂಬೆಯ ಮೇಲೆ ಕುಳಿತುಕೊಂಡು ಕಾಗೆಯೊಂದು ಬಿಟ್ಟುಬಿಡದೆ ಕಿರಿಚುತ್ತಿದ್ದಿತು. ಶಾಸ್ತ್ರಿಗಳು ತಮಾಷೆ ಗಾಗಿ ನುಡಿದರು :

" ಏನು, ಕಾಗೆ ಹಾಗೆಯೇ ಕಿರಿಚುತ್ತಲೇ ಇದೆಯಲ್ಲ ! "

ಕೂಡಲೆ ಪ್ರಭೆಯು ಮಾತನಾಡಿದಳು :

" ನಿಮಗೆ ಗೊತ್ತಿಲ್ಲವೇ ಶಾಸ್ತ್ರಿಗಳೆ ? ನಾಳೆಯ ಮೇಲ್ ಟ್ರೇಸಿ ನಿಂದ ಗಿರಿಧರನು ಬರುವವನಿದ್ದಾನೆ. "

ಉಷೆಯು ಹೇಳಿದಳು :

" ಗಿರಿಧರನೊಬ್ಬನೇ ಏಕೆ ! ಸುದರ್ಶನನೂ ಬರಲಿದ್ದಾನೆ."

" ಹೀಗೇನು ? ಒಳ್ಳೆಯದಾಯಿತು. ಇಲ್ಲಿ ಬಂದಾಗ ಕೆಲವು ಹೊತ್ತು ಕುಳಿತು ಮಾತುಕತೆಯಾಡಲಿಕ್ಕೆ ಅನುಕೂಲವಾಯಿತು. ನೋಡು ಉಷಾ, ಸುದರ್ಶನನೊಡನೆ ಮಾತನಾಡುವುದೆಂದರೆ ನನಗೆ ಬಲು ಇಷ್ಟ. ಅಂತಹ ಜೀವ ಸಿಕ್ಕುವುದು ಅಪರೂಪ ! "

ಉಷೆಯ ಮುಖದ ಮೇಲೆ, ಅಭಿಮಾನ-ಆನಂದಗಳನ್ನೊಡಗೊಂಡ ಮಿಂಚು ಒಂದುಸಲ ಮಿನುಗಿಹೋಯಿತು ; ಪ್ರಭೆಯನ್ನೊಡಗೊಂಡು

ಮುರಳಿ ಕಿರುಮನೆಗೆ ಬಂದಳು. ಗಡಿಯಾರದಲ್ಲಿ ಐದೂವರೆ ಗಂಟೆಯಾಗಿದ್ದಿತು.

ಫಕ್ಕನೆ ಏನೋ ನೆನಪಾದಂತೆ ಪ್ರಭೆ ಹೇಳಿದಳು :

" ಉಷಾ ! ನಾನಿಂದು ತಂದೆಯೊಡನೆ ಪೇಟೆಯ ಕಡೆಗೆ ಹೋಗಿ ಬರಬೇಕಾಗಿದೆ. ಈಗ ಹೊರಡಲೇ ಬೇಕು."

ಅರೆನಿಮಿಷವೂ ನಿಲ್ಲದೆ ಪ್ರಭೆಯು ಹೊರಟು ನಡೆದಳು.

---

## ೨ನೆಯ ಪರಿಚ್ಛೇದ

ಒಗೆಬಗೆಯ ಜನರ, ಬಗೆಬಗೆಯ ಭಾವಗಳ ಪ್ರದರ್ಶನವನ್ನು ನೋಡಬೇಕಾದರೆ ರೈಲ್ವೇಸ್ಟೇಷನ್ನಿಗೆ ಹೋಗಬೇಕು. ಜಗತ್ತಿನ ಮಾನವಕೋಟಿಯ ಸಂಕ್ಷಿಪ್ತಚಿತ್ರವೆಂದರೆ ರೈಲ್ವೇಸ್ಟೇಷನ್ನು. ಕಥೆ-ಕಾದಂಬರಿಕಾರರು ಆಗಾಗ ಅಲ್ಲಿಗೆ ಹೋಗುತ್ತಲಿದ್ದರೆ, ಅನೇಕ ಕಥಾ-ವಸ್ತುಗಳನ್ನವರು ಪಡೆಯಬಹುದು. ಕವಿಗಳು ಹೋಗಿ, ತಮ್ಮ ಹೃತ್ತ-ರಂಗಿಣಿಗಳಲ್ಲಿ ಭಾವತರಂಗಗಳನ್ನು ಎಬ್ಬಿಸಿಕೊಳಬಹುದು. ಉಪನ್ಯಾಸಕರಿಗೆ ಅಲ್ಲಿ— ಜನಸಾಮಾನ್ಯರ ಕಷ್ಟಮಯವಾದ ಬಾಳನ್ನು ಹೃದಯ-ದ್ರಾವಕವಾಗಿ ಬಣ್ಣಿಸುವುದಕ್ಕೆ— ಸಾಕಷ್ಟು ಸಾಮಗ್ರಿಗಳು ಸಿಕ್ಕಬಹುದು. ಪ್ರಾಥಮಿಕಶಾಲೆಗಳ ಉಪಾಧ್ಯಾಯರು, ವಿಶೇಷ ಶ್ರಮವನ್ನು ವಹಿಸದೆ ತಮ್ಮ ವಿದ್ಯಾರ್ಥಿಗಳಿಗೆ ದೇಶವಿದೇಶಗಳ ಜನರನ್ನೂ ಅವರ ಉಡಿಗೆ, ತೊಡಿಗೆ, ನಡೆನುಡಿಗಳನ್ನೂ ಗುರುತುಮಾಡಿಕೊಡಬಹುದು. ನಾಟಕ-ಸಿನೇಮಾಗಳನ್ನು ನೋಡುವ ಅಪೇಕ್ಷೆಯಿದ್ದು, ದುಡ್ಡಿಲ್ಲದೆ ಮಿಡುಕುವ ಬಡವರಾದ ರಸಿಕರು ರೈಲ್ವೇಸ್ಟೇಷನ್ನಿಗೆ ಹೋಗಿ, ಕೊಂಚವಾದರೂ ಮನಸ್ಸನ್ನು ಸಂತಯಿಸಿಕೊಳಬಹುದು. ಸಾಹಿತ್ಯ ಪರಿಷತ್ತಿನವರು ಔತಣಕೊಟ್ಟು, ಹಣವೆಚ್ಚಮಾಡಿ ಕರೆಯಿಸಿದರೂ ಬೆರೆಯದಂತಹ ಸಕಲಭಾಷಾಸಮ್ಮೇಲನವನ್ನೂ ಅಲ್ಲಿ ಕಾಣಬಹುದು.

ಅಭಿನಯಕೌಶಲವನ್ನು ಪಡೆಯಬೇಕೆಂದು ಅಪೇಕ್ಷಿಸುವ ನೂತನ ನಟವರ್ಗವಂತೂ ರೈಲ್ವೇಸ್ಟೇಷನ್ನಿಗೆ ಅವಶ್ಯವಾಗಿ ಹೋಗಲೇ ಬೇಕು. ವಿಯೋಗ ಹೊಂದಲಿರುವ ಆತ್ಮೀಯರ—ಅದರಲ್ಲಿಯೂ ದಂಪತಿವೃಂದದ ಕಾತರಭಾವದ ವೈವಿಧ್ಯವು ಅಲ್ಲಿ ನೋಡಲು ದೊರೆಯುವುದು. ಬರಲಿರುವ ಬಂಧು-ಬಾಂಧವರಿಗಾಗಿ ದಾರಿಯನ್ನು ಕಾಯುತ್ತ – ನಿಮಿಷವನ್ನು ಗಂಟೆಯಾಗಿ ಕಾಣುವ—ಸ್ತ್ರೀಪುರುಷ ನಿರೀಕ್ಷಕರ ಆತುರತೆಯ ರೀತಿಗಳೂ ಕಣ್ಣಿಗೆ ಬೀಳುವುವು. ಬಹುಕಾಲದಿಂದ ಅಗಲಿದ ಆತ್ಮೀಯರನಿಂದು ಕಾಣಲಿರುವೆವೆಂಬ ಆನಂದದಿಂದ, ಕುಳಿತಲ್ಲಿ ನಿಂತಲ್ಲಿ ಸವಿಸವಿಯಾದ ಕನಸುಗಳನ್ನು ಕಾಣುತ್ತಿರುವ ಕನಸಿಗರ ಬಳಗವೂ ಅಲ್ಲಿ ಕಣ್ಣನ್ನು ಸೆಳೆಯುವುದು. ಆಪ್ತೇಷ್ಟರ ವ್ಯೈಯಲಸಿಕೆಯ ವಾರ್ತೆಯನ್ನು ಕೇಳಿ, ಅವರಿಗೆ ಬೇಗನೆ ನೆಮ್ಮದಿಯುಂಟಾಗಲೆಂದು ಮನದ ಒಂದು ಭಾಗವು ದೇವರನ್ನು ನೆನೆಯುತಿರುವಾಗಲೇ ಇನ್ನೊಂದು ಭಾಗವು 'ಏನಾದರೂ ಅನಿಷ್ಟವಾದರೆ ಮುಂದೇನು ?' ಎಂದು ಯೋಚಿಸಲು— ನಡುನಡುಗಿ ನಿಟ್ಟುಸಿರು ಹಾಕುವ ಜನರಿಗೂ ಅಲ್ಲಿ ಕೊರತೆಯಿರುವುದಿಲ್ಲ. ಮರಣಶಯ್ಯೆಯ ಮೇಲೆ ಮಲಗಿದ ಪತಿರಾಜನಿಗಾಗಿ ಹೃದಯವನ್ನೇ ಕರಗಿಸಿ ಕಣ್ಣೀರನಾಗಿಸುತ್ತಿದ್ದ ನವವಧುವಿನ ಕರುಣಾಚಿತ್ರವು ಒಂದೆಡೆ ಯಲ್ಲಿ ಕಾಣುತ್ತಿದ್ದರೆ, ಇನ್ನೊಂದೆಡೆಯಲ್ಲಿ ಹೊಸ ಹಸುಮಗುವನ್ನೆತ್ತಿ, ನಸುನಗೆಯ ತೆಳುದೆರೆಗಳನ್ನು ಹರಡುತ್ತ, ಇನಿಯನ ಮನೆಗೆ ಹೊರಟ ಪುತ್ರವತಿಯ ಸಂತಸದ ಚಿತ್ರವು ಕಾಣಲು ಸಿಕ್ಕಬಹುದು. ಮರುಳು-ಗಂಡುಗಳನ್ನು ತಮ್ಮ ಕಡೆನೋಟದ ಬಲೆಯನ್ನು ಬೀಸಿ ಸೆರೆಹಿಡಿಯುವ ಸೋಗಲಾಡಿಯರಂತೆಯೇ, ಗರತಿಯರಾದ ಹೆಣ್ಣುಮಕ್ಕಳನ್ನು ಕಾಮುದ ಕಣ್ಣುಗಳಿಂದ ಮುಟ್ಟುತ್ತ ಅಲೆದಾಡುವ ಬೀದಿಯ ರಸಿಕರೂ ಅಲ್ಲಿ ಬೇಕಾದಷ್ಟು ಜನರು.

ಯೋಗ-ವಿಯೋಗಗಳಲ್ಲಿಯೇ ವಿವಿಧಭಾವಗಳ ಬೆಳವಣಿಗೆಯಲ್ಲವೇ? ಹಾಗಾದರೆ ರೈಲ್ವೆಸ್ಟೇಷನ್ನು ತಂದೆ-ತಾಯಿ-ಮಕ್ಕಳ, ಗಂಡ-ಹೆಂಡತಿ ಯರ, ಅಣ್ಣ-ತಮ್ಮದಿರ, ಅಕ್ಕ-ತಂಗಿಯರ, ಗೆಳೆಯ-ಗೆಳೆಯರ, ಪ್ರವಾಸಿಕ ಕೂಲಿಯವರ, ವ್ಯಾಪಾರಿ-ಗಿರಾಕಿಗಳ, ಭಿಕ್ಷುಕ-ದಾತೃವರ್ಗದ ಯೋಗ-

ವಿಯೋಗಗಳ ರಂಗಭೂಮಿಯು; ಎಂದ ಮೇಲೆ ಇಲ್ಲಿ ಎಷ್ಟೊಂದು ಭಾವಗಳು ಹುಟ್ಟಿ ಬೆಳೆವಣಿಗೆ ಪೊಂದಬೇಡ !

ಸುಮಾರು ಒಂಬತ್ತೂಕಾಲು ಗಂಟೆಯಾಗಿದ್ದಿತು. ಬೆಳಗಾಂವಿಯ ರೈಲ್ವೇ ಸ್ಟೇಷನ್ನಿನ ಮೇಲೆ, ಮೇಲ್‌ಟ್ರೇನಿನ ಪ್ರವಾಸಿಕರ ಗಲಾಟೆಯೇ ಗಲಾಟೆ. ಸರಿಯಾದ ಸ್ಥಳವು ಸಿಕ್ಕೀತೋ ಇಲ್ಲವೋ— ಎಂಬ ಚಿಂತೆಯು ಪ್ರತಿಯೊಬ್ಬ ಪ್ರವಾಸಿಕನ ಮುಖದ ಮೇಲೆಯೂ ಸ್ಪಷ್ಟವಾಗಿ ಮೂಡಿದುದು ತೋರುತ್ತಿದ್ದಿತು. ಹಣಸುರಿದು ಸುರಿದು ಪದವೀ-ಧರನಾಗಲಿರುವ ವಿದ್ಯಾರ್ಥಿ— ತನಗೆ ಮುಂದೆ ಸರಿಯಾದ ನೌಕರಿ ದೊರೆತೀತೋ ಇಲ್ಲವೋ ಎಂದು—ತಳೆಯುವ ಚಿಂತಾಭಾವವನ್ನು ಮೀರಿಸುವಂತಹದು ಈ ಜನರ ಮುಖಭಾವ ! ‘ ಏನಾದರೇನು ? ನನಗೆ ದೊಡ್ಡ ದೊಡ್ಡ ಜನರ ‘ ವಸೀಲಿ ’ಯಿದೆ, ಸರಿಯಾದ ನೌಕರಿ ಸಿಕ್ಕೇಸಿಕ್ಕುವುದು ’ ಎಂದು ನಿಶ್ಚಿಂತೆಯಿಂದ ತಿರುಗುವ ಸಿರಿವಂತ ವಿದ್ಯಾರ್ಥಿಗಳಂತೆ, ವಿಶೇಷ ಪ್ರವಾಸ ಮಾಡಿದ ಅನುಭವಿಕರು, ಯಾವ ಯೋಚನೆಯೂ ಇಲ್ಲದೆ, ಪ್ಲ್ಯಾಟ್‌ಫಾರ್ಮಿನ ಮೇಲೆ ಹಾಯಾಗಿ ಅಲೆದಾಡುತ್ತಲಿದ್ದಾರೆ. ಟ್ರೇನು ಬರುವುದಕ್ಕೆ ಇನ್ನೂ ಹದಿನೈದು ನಿಮಿಷಗಳಿದ್ದರೂ ಈಗಲೆ ಹತ್ತುವುದಕ್ಕೆ ಸಿದ್ಧರಾಗಿ ನಿಂತ ಹಳ್ಳಿಗರು ‘ಯಾವುದಕ್ಕೂ ಪೂರ್ವಸಿದ್ಧತೆಯಿರಬೇಕು’ ಎಂದು ಉಪದೇಶಿಸುವ ನಾಗರಿಕರಿಂದಲೆ ‘ ಹಳ್ಳಿಯ ಕೆಂಚರು ’ ಎಂಬ ಬಿರುದನ್ನು ಪಡೆದು ನಗಿಸಿಕೊಳುತ್ತಲಿದ್ದಾರೆ. ಹಸಿದ ಹೊಟ್ಟೆ ಅನ್ನದ ದಾರಿಯನ್ನು ಕಾಯುವಂತೆ ವೃತ್ತಪತ್ರಿಕೆಗಳ ವ್ಯಾಪಾರಿಗಳೂ ತಿಂಡಿ-ತೀರ್ಥಗಳ ಮಾರಾಟದವರೂ ಟ್ರೇನಿನ ದಾರಿಯನ್ನು ಕಾಯುತ್ತಿದ್ದಾರೆ.

ಎರಡನೆಯ ತರಗತಿಯ ಪ್ರವಾಸಿಕರ ‘ ವೇಟಿಂಗ್‌ರೂಮಿ ’ನ ಮುಂಬದಿಯ ಬೆಂಚಿನಮೇಲೆ ಉಷಾ, ಪ್ರಭಾ ಕುಳಿತಿದ್ದಾರೆ; ಟ್ರೇನು ಬರುವುದಕ್ಕೆ ಇನ್ನೂ ವೇಳೆಯಿದೆಯೆಂಬುದು ಗೊತ್ತಿದ್ದಿತಾದರೂ ಆಗಾಗ ಆತುರದೃಷ್ಟಿಯಿಂದ ಅತ್ತಕಡೆಗೆ ನೋಡುತ್ತಲಿದ್ದಾರೆ.

ಇಂದು ಪ್ರಭೆಗೆ ಅಡಿಯಿಂದ ಮುಡಿಯವರೆಗೂ ಸಡಗರದ ಅಲಂ-ಕಾರಗಳು. ಉಟ್ಟ ಜರಿಯಂಚಿನ ಗುಲಾಬಿ ಬಣ್ಣದ ರೇಶಿಮೆಯ ಪತ್ತಲದ

ಅಂಚಲವು ನೆಲಕ್ಕೆ ಮುತ್ತು ಕೊಡುತ್ತಿದ್ದಿತು. ತೊಟ್ಟುದು ಮುಗಿಲ ಬಣ್ಣದ ಮೆರುಗಿನ ಕುಪ್ಪಸ. ತಲೆಯ ನಿಡುಗೂದಲನ್ನು ಓರಣವಾಗಿ ಹಿಕ್ಕಿ, ಮಹಾರಾಷ್ಟ್ರಸ್ತ್ರೀಯರಂತೆ ಮುಡಿಯನ್ನು ಕಟ್ಟಿದ್ದಳು. ಕೆಂಪು ಹಸಿರು ಹರಳುಗಳನ್ನು ಕೆಚ್ಚಿದ ಚಿನ್ನದ ಮೊಗ್ಗೆಸರವನ್ನು ಮುಡಿಗೆ ಸಿಕ್ಕಿಸಿದ್ದಳು. ಮುಡಿಯನ್ನು ಬಳಸಿಕೊಂಡ ಮಲ್ಲಿಗೆಯರಳ ಮಾಲೆಯು, ಈಗ ತಾನೆ ಕೊಯ್ದುತಂದ ಹೂಗಳೇನೋ ಎನ್ನುವಂತಿದ್ದಿತು. ಕಿವಿಯಲ್ಲಿ ತೊಳಗುವ ವಜ್ರದ ಬೆಂಡೋಲೆಗಳು; ಕೊರಳಲ್ಲಿ ದಿನದ ಒಡವೆಗಳಿಗಿಂತ ಹೆಚ್ಚಾಗಿ ಒಂದು ಮುತ್ತಿನ ಏಕಾವಳಿ, ಒಂದು ಕಾಸಿನ ಸರ. ಪ್ರಭಾ ಒಂದುಸಲ ಕುರುಳನ್ನು ತಿದ್ದಿತೀಡಿ ಸರಿಮಾಡಿಕೊಳ್ಳುವಳು, ಇನ್ನೊಂದುಸಲ ಮೂಗುಬೊಟ್ಟನ್ನು ಮುಟ್ಟಿ ನೋಡಿಕೊಳ್ಳುವಳು; ಮತ್ತೊಂದು ಸಲ ಸೀರೆಯ ನಿರುಗೆಯನ್ನು ಸರಿಪಡಿಸಿಕೊಳ್ಳುವಳು. ಆಗಾಗ ಕೈಯನ್ನು ಮೇಲಕ್ಕೆತ್ತಿ ಮುಂಗೈಯ ಹೊಂಬಳೆಗಳನ್ನು ನಿಟ್ಟಿಸಿ ನೋಡುವಳು; ನುಣುಪಾದ ಮೊಚ್ಚೆಗಳನ್ನು ಮೆಟ್ಟಿದ ಅಡಿಗಳಮೇಲೆ—ಮಧ್ಯೆಮಧ್ಯೆ—ದೃಷ್ಟಿಗಳನ್ನು ಚೆಲ್ಲುವಳು.

ಉಷೆಯ ಉಡುಪು-ತೊಡಪುಗಳಲ್ಲಿ ವಿಶೇಷ ಆಡಂಬರವನ್ನೇನು ಕಾಣಲಾಗದಿದ್ದರೂ, ಉಟ್ಟಿದ್ದ ತಿಳಿಸೀಲಿಯ ಪತ್ತಲ, ತೊಟ್ಟಿದ್ದ ಮುತ್ತಿನ ಬಣ್ಣದ ಕುಪ್ಪಸ ಅಚ್ಚುಕಟ್ಟಾಗಿದ್ದುವು. ತಲೆಗೂದಲನ್ನು ಹಿಕ್ಕಿ ಬಿಡುಮುಡಿಯನ್ನು ಹೆಣೆದುಕೊಂಡಿದ್ದರೂ, ಮುಂಗುರುಳು ಕಟ್ಟಿಗೆ ಒಳಗಾಗವೆ, ಹಣೆಯನ್ನು ಬಳಸಿ—ಕೊಂಕುಕೊಂಕಾಗಿ—ಮೆಲುಗಾಳಿಗೆ ತೊನೆದಾಡುತ್ತಲಿವೆ. ಮುಡಿದ ಮಲ್ಲಿಗೆ, ಹಣೆಯ ತಿಲಕ, ಕಿವಿಯ ಕೆಂಪಿನೋಲೆ ಇವಿಷ್ಟು ಅವಳ ಅಲಂಕಾರಗಳು. ಇವೆಲ್ಲವುಗಳನ್ನೂ ಮಿಕ್ಕಿ ಮುಂದುವರಿವ ಅಲಂಕಾರವೆಂದರೆ ಗಾಂಭೀರ್ಯದಿಂದ ಕೂಡಿದ ಅವಳ ಮಂದಹಾಸ, ತೊಳಗುವ ತಾರೆಯಂತಹ ಕಣ್ಣುಗಳ ಸ್ಥಿರದೃಷ್ಟಿ.

ಪ್ರಭಾ ಸಹಜವಾದ ಮುಗ್ಧಭಾವದಿಂದ ಮಾತನಾಡಿದಳು :

"ಗಿರಿಧರನು ಸಾಹೇಬರ ವೇಷದಲ್ಲಿದ್ದರೆ ಒಲು ಒಪ್ಪುತ್ತಾನೆ ನೋಡು ಉಷಾ! ಹೋದ ಸಲ ಇಲ್ಲಿಗೆ ಬಂದಾಗ ತಟ್ಟನೆ ಅವನ ಗುರುತೇ ಸಿಕ್ಕಲಿಲ್ಲ ನನಗೆ!"

"ಚೆನ್ನಾಗಿಯೆ ಇದ್ದವರು ಯಾವ ವೇಷದಲ್ಲಿದ್ದರೇನು, ಚೆನ್ನಾಗಿಯೇ ಕಾಣುತ್ತಾರೆ. ಸುದರ್ಶನನು ಬರಿಯೆ ಖಾದಿಯ ಬಟ್ಟೆಗಳನ್ನೇ ಧರಿಸುತ್ತಾನೆ; ಅವನೇನು ಚೆನ್ನಾಗಿ ಕಾಣುವುದಿಲ್ಲವೇ ?"

"ಒಲ್ಲೆ ನನ್ನ ತಾಯಿಾ! ಸುಡುಗಾಡು ಖಾದೀ ಏನತ್ತಿತು! ಹಚ್ಚಡದಂತಹ ಪಂಚೆಯೇನು, ವಿಚಿತ್ರವಾದ ಅಂಗಿಯೇನು, ಮೈಮೇಲಿನ ಚಾದರವೇನು! ನನಗಂತೂ ಆತನ ಆ ವೇಷ, ಆ ಭೂಷಣ ಸ್ವಲ್ಪವೂ ಒಪ್ಪಿಗೆಯಿಲ್ಲ ನೋಡು !"

"ಹೂಂ! ದೇವರು ಒಬ್ಬೊಬ್ಬರ ಕಣ್ಣಿಗೆ ಒಂದೊಂದು ವಿಧದ ಕನ್ನಡಿ ಹಾಕಿದ್ದಾನೆ; ಎಂತಲೇ ಒಬ್ಬರಿಗೆ ಸೇರಿದುದು ಇನ್ನೊಬ್ಬರಿಗೆ ಸೇರಿಕೆಯಾಗದು !"

"ನೋಡು ಉಷಾ, ನೀನು ಕಣ್ಣು .. ಕನ್ನಡಿ .. ಎನ್ನುತ್ತಲೆ ನನಗೊಂದು ಮಾತು ನೆನಪಾಯಿತು ! ಗಿರಿಧರನು ಹಾಕುತ್ತಿರುವ ಕನ್ನಡಕಕ್ಕೆ ಮುನ್ನೂರು ರೂಪಾಯಿಗಳಂತೆ ನೋಡಮ್ಮಾ ! ಎಷ್ಟು ಚೆನ್ನಾಗಿದೆಯೆನ್ನುತ್ತೀ ! ನೀನೇನು ನೋಡಿಲ್ಲವೇ ಬೇರೆ ಅದನ್ನು ?"

"ಅಹುದು, ಚೆನ್ನಾಗಿದೆ. ಚೆನ್ನಾಗಿರದಿದ್ದರೆ ಮೂರು ರೂಪಾಯಿ ಬೆಲೆಬಾಳದುದಕ್ಕೆ ಮುನ್ನೂರು ರೂಪಾಯಿಗಳನ್ನು ಯಾರು ಕೊಟ್ಟಾರು ? ನಮಗೆ ಚೆನ್ನೆನಿಸಿದುದಕ್ಕೆಲ್ಲಾ ಬೆಲೆ ಹೆಚ್ಚಲ್ಲವೇ ?"

"ನಿಜ ನೋಡು .. ನಿನ್ನ ಮಾತು ಉಷಾ! ನಮ್ಮ ನೆರೆಮನೆಯ ನಾಡಗೌಡರ ಸೀತಾ ಇಲ್ಲವೆ? ಆಕೆ ಮೊನ್ನೆ ಒಂದು ರವಿಕೆಯ ಬಟ್ಟೆ ತರಿಸಿದ್ದಾಳೆ. ಹನ್ನೆರಡು ರೂಪಾಯಿ ಅದರ ಬೆಲೆಯಂತೆ. ಸೀತಾ ಅದನ್ನು ಕೊಂಡಾಡಿಯೆ ಕೊಂಡಾಡುತ್ತಾಳೆ. ನನಗೆ ಅದರ ಬಣ್ಣ ನೇಗೆ. . ಒಂದು ರವೆಯಷ್ಟೂ ಒಪ್ಪಿಗೆಯಾಗಲಿಲ್ಲ ನೋಡು !"

ಮೂರನೆಯ ಗಂಟೆ 'ಥಣ್ ಥಣ್' ಎಂದು ಬಾರಿಸಿತು. ತ್ರಿಳಿ-ದುಪ್ಪವನ್ನು ತಿಂದು ಕಾಡಿಗೆಯನ್ನು ಕಕ್ಕುವ ದೀವಿಗೆಯಂತೆ, ದೇಶದ ಬಡಬಗ್ಗರ ಹಣವನ್ನು ಬಕ್ಕರಿಸಿ ಕಪ್ಪು ಹೊಗೆಯನ್ನು ಕಾರುತ್ತಲಿರುವ ಹೊಗೆಬಂಡಿ, ಸ್ಟೇಷನ್ನಿನ ಬಳಿ ಬರುತ್ತಿರುವುದು ಕಾಣಿಸಿತು. ಎಲ್ಲರಂತೆ ಉಷೆ-ಪ್ರಭೆಯರೂ ಅಸ್ಥಿರಚಿತ್ತರಾಗಿ, ಮೇಲಕ್ಕೆದ್ದು, ಬಂಡಿ ನಿಲ್ಲುವ

ಸ್ಥಳದ ಕಡೆಗೆ ಆತುರದ ನಡಿಗೆಯಿಂದ ಸಾಗಿದರು. ಓಡಿ ಓಡಿ ಬಂದ ಬಳ್ಳಿಕೆಯಿಂದ ಅವಿರತವಾದ ನಿಟ್ಟುಸಿರಿಡುತ್ತ ಬಂಡಿ ನಿಂತಿತು. ಇಳಿಯುವ ಏರುವ ಜನರ ಗಲಾಟೆಗೆ ಅಳತೆಯಿಲ್ಲ. ಎಂತೆಂತಹ ಪರದಾರ ಸೋದರರಿಗೂ ಪರಸ್ತ್ರೀಯರ ಸ್ಪರ್ಶದ ಅನುಭವವಾಗ. ಎಂತೆಂತಹ ಪತಿ-ವ್ರತಾಶಿರೋಮಣಿಗಳಿಗೂ ಪರಪುರುಷರ ಅಪ್ಪುಗೆಯ ಅನುಭೂತಿಯಾಗ. ಪಂಥ-ಜಿದ್ದುಗಳಿಲ್ಲದೆ ತಲೆತಲೆಗಳ ಕಾದಾಟ ನಡೆಯಿತು. ಗುರುತು ಪರಿಚಯುಗಳಿಲ್ಲದಲ್ಲಿಯೂ ಕೈಗೆಕೈ ಕುಲುಕಾಟವಾಯಿತು. ಉಷೆ-ಪ್ರಭೆಯರೂ ತಮ್ಮ ಆಳುಗಳನ್ನು ಹಿಂಬಾಲಿಸಿ—ಅಂತಹ ಗೊಂದಲದಲ್ಲಿಯೂ ತೂರಿಕೊಂಡು—ಬಂಡಿಯ ಬಳಿಯನ್ನು ಸಾರಿದರು; ಅಲ್ಲಲ್ಲಿ ನೋಡುತ್ತ ನಡೆದಿರುವಾಗ, ಎರಡನೆಯ ತರಗತಿಯ ಬಂಡಿಯೊಂದರ ಎರಡು ಕಿಟಕಿಗಳಲ್ಲಿ, ಕಿರುನಗೆ ನಗುತ್ತ ಹೊರಕ್ಕೆ ಚಾಚಿದ ಮುಖಗಳೆರಡನ್ನು ನೋಡಿದರು. ಇಬ್ಬರ ಮುಖಗಳೂ ಅರಳಿದ ತಾವರೆಗಳಾದುವು. ಆನಂದದ ಆತಿಶಯತೆಯನ್ನು ಸೂಚಿಸುವಂತೆ 'ಹೋ! ' ಎಂದು ಇಬ್ಬರೂ ಕೇಕೆ ಹಾಕಿದರು.

ಕಿಟಕಿಯಲ್ಲಿ ಕಾಣುತ್ತಿರುವ ಮುಖಗಳಲ್ಲಿ ಒಂದು ಕಿರುಗೂದಲ ಕ್ರಾಪಿನಿಂದ ಕೂಡಿದೆ; ಕೊರಳಲ್ಲಿ ಸೀಮೆಯ ಕೊರಳುಪಟ್ಟಿಯಿದೆ. ಇನ್ನೊಂದು ಅಸ್ತವ್ಯಸ್ತವಾದ ನಿಡುಗೂದಲುಗಳನ್ನು ಭುಜದವರೆಗೆ ಬೀಳಿಸಿಕೊಂಡಿದೆ. ಮೊದಲನೆಯ ಮುಖದ ಬಣ್ಣ ಬೆಳುಗೆಂಪು; ಎರಡನೆಯುದರ ಬಣ್ಣವು ಗೋದಿಗೆಂಪು. ಉಷೆ-ಪ್ರಭೆಯರ ಉತ್ಸಾಹದ ಕೇಕೆಗಳಲ್ಲಿ ಆ ಎರಡೂ ಮುಖಗಳಿಂದ ಹೊರಟ ಸಂತಸದ ಕೂಗೂ ಬೆರತುಕೊಂಡಿತು. ನಸುವೇಳೆಯಲ್ಲಿಯೆ ಕಿಟಕಿಯಲ್ಲಿ ಕಂಡ ಮುಖಗಳನ್ನೇ ಪಡೆದುಕೊಂಡ ತರುಣರಿಬ್ಬರು ಕೆಳಕ್ಕಿಳಿದು ಬಂದರು. ಪ್ರಭಾ ಗಡಿಬಿಡಿಯಿಂದ ಮುಂದುವರಿದು ಹೋಗಿ, ಆ ಕಿರುಗೂದಲ ಕ್ರಾಪಿನ ತಲೆಯ—ಸಾಹೇಬರ ವೇಷದ—ತರುಣನ ಕೈಯನ್ನು ಹಿಡಿದು ಕುಲುಕಿದಳು. ಎಡಗೈಯಿಂದ ಕೋಟಿಗೆ ಹತ್ತಿದ ದೂಳಿಯನ್ನು ಕೊಡಹುತ್ತ ನುಡಿದಳು:

"ಅಯ್ಯೊ, ಇದೇನಿದು? ಕೋಟಿಗೆಲ್ಲ ಹುಡಿ ತಗುಲಿಕೊಂಡಿದೆಯಲ್ಲಾ!"

ಉಷಾ ಇನ್ನೊಬ್ಬ ತರುಣನ ಬಳಿಯಲ್ಲಿ ಹೋಗಿನಿಂತು, ವಿನಯದ ನಗೆಯೊಡನೆ ಕೇಳಿದಳು:

" ಪ್ರವಾಸ ಸುಖಕರವಾಯಿತಲ್ಲವೆ ? "

" ದೂರದ ಪ್ರವಾಸ, ಸುಖಕರವೆಂದರೆ ಏನು ! ಇಷ್ಟೇ. . ಗಿರಿಧರ ಜೊತೆಯಲ್ಲಿದ್ದನೆಂದು ಎರಡನೆಯ ತರಗತಿಯಲ್ಲಿ ಬರಬೇಕಾಯಿತು. ಜನರ ಗಲಾಟೆಯಲ್ಲಿ ಸಿಕ್ಕದೆ ನಿದ್ದೆಗೇಡಾಗದೆ ಬಂದೆವು. ಇನ್ನೇನು ? ಮನೆಯಲ್ಲಿ ಎಲ್ಲರೂ ಸೌಖ್ಯವಷ್ಟೇ?

" ಎಲ್ಲರೂ ಸುಖವಾಗಿದ್ದಾರೆ ! "

ಸ್ನೇಹಮಯ ದೃಷ್ಟಿಯಿಂದ ನೋಡುತ್ತ ನಿಂತ ಪ್ರಭಾ ಬಳಿಯಲ್ಲಿಯೆ ಇದ್ದರೂ ಆ ಸಾಹೇಬರ ವೇಷದ ತರುಣನು, ಆಶೆ ಬೆರೆತ ತನ್ನ ನೋಟವನ್ನು ಉಷೆಯ ಕಡೆಗೆ ಹೊರಳಿಸಿದ್ದನು. ' ಈಕೆ ಮೊದಲು ತನ್ನ ಕಡೆಗೆ ಏತಕ್ಕೆ ಬರಬಾರದು ! '. . ಎಂಬ ಅಭಿಮಾನದ ಇರುವೆಗಳು ಆತನ ಕರುಳನ್ನು ಕಚ್ಚಿದಂತೆ–ಮುಖದ ಮೇಲೆ ಒಂದು ಭಾವರೇಷೆ ಮೂಡಿ ಮರೆಯಾಯಿತು. ಮಾತನಾಡಿಸುತ್ತಲಿದ್ದ ಪ್ರಭೆಯ ಕಡೆಗೆ ಲಕ್ಷ್ಯವನ್ನು ಕೊಡದೆ— ಸಲುಗೆಯ ದನಿಯಲ್ಲಿ— ಉಷೆಯನ್ನು ಕುರಿತು ಆತ ನುಡಿದನು :

" ಏನು ಉಷಾ, ನಿನ್ನ ಸಂಗೀತದ ವ್ಯಾಸಂಗ ಚೆನ್ನಾಗಿ ಸಾಗಿದೆಯಲ್ಲವೆ ? "

ಮುಂದಿನ ಮಾತನ್ನು ಜೊತೆಗೆ ಬಂದ ತರುಣನನ್ನು ನೋಡುತ್ತ ನುಡಿದನು :

" ಸುದರ್ಶನ, ಮೊನ್ನೆ ನೋಡು, ಮುಂಬಯಿಯಲ್ಲಿ ಆ ಗುಜರಾತಿ ಹುಡುಗಿ ಥಿಯೇಟರಿನಲ್ಲಿ ಹಾಡಿದಳಲ್ಲವೇ ? " ಮತ್ತೆ ಉಷೆಯ ಕಡೆಗೆ ಮುಖಮಾಡಿದನು :

" ನೋಡು ಉಷಾ ! ಆ ಹುಡುಗಿ ಹಾಡುವಾಗ, ನಿಮಿಷ ನಿಮಿಷಕ್ಕೂ ನಿನ್ನ ನೆನಪು ನನಗೆ ಆಗುತ್ತಿದ್ದಿತು ! "

ಉಷಾ ಗಿರಿಧರನ ಕಡೆಗೆ ನೋಡುತ್ತ ಒಂದು ಬಗೆಯ ನಗೆ ನಕ್ಕಳು, ಬಳಿಕ ಮಾತನಾಡಿದಳು :

"ನನ್ನದೇನು ಸಂಗೀತದ ವ್ಯಾಸಂಗ! ಕುಂಟುತ್ತ ಕೂರುತ್ತ ಸಾಗಿದೆ—ಆಯಿತು; ಹೇಳಿ ಕೇಳಿ ಬೆಳಗಾಂವಿಯಿದು!"

ಈ ಮಾತುಗಳನ್ನಾಡುತ್ತಿರುವಾಗಲೂ ಉಷೆಯದು ಅರ್ಧ ನೋಟ ಗಿರಿಧರನ ಕಡೆಗೆ, ಅರ್ಧನೋಟ ಸುದರ್ಶನನ ಕಡೆಗೆ.

ಆಳುಗಳಿಬ್ಬರೂ ಬಂಡಿಯಲ್ಲಿಯ ಸಾಮಾನುಗಳನ್ನು ಹೊರಕ್ಕೆ ತೆಗೆದು, ಹೊತ್ತುಕೊಂಡು ನಡೆದರು. ಗಿರಿಧರ-ಸುದರ್ಶನರೂ ಉಷೆ-ಪ್ರಭೆಯರೂ ಅವರನ್ನು ಹಿಂಬಾಲಿಸಿದರು. ಹೋಗುತಿರುವಾಗಲೆ ಸುದರ್ಶನ ಉಷೆಯರಲ್ಲಿ ಕುಶಲಸಮಾಚಾರದ ಮಾತುಗಳು ಹಾಗೆಯೆ ನಡೆದಿದ್ದುವು. ಬಲುದಿನ ಅಗಲಿದ ತಂಗಿಯೊಡನೆ ಮಾತನಾಡುವಂತಹ ಸಲುಗೆಯು ಮಾತು ಸುದರ್ಶನನದು. ಅವರಿಬ್ಬರ ಮಾತಿನಲ್ಲಿ ನಡು-ನಡುವೆ ಗಿರಿಧರನೂ ಬಾಯಿ ಹಾಕುವನು. ಎಲ್ಲ ಜನರೂ ಸೇರಿ, ಸ್ಟೇಷನ್ನಿನ ಹೊರಗಡೆಯಲ್ಲಿ ತಮ್ಮನ್ನು ಕಾಯುತ್ತ ನಿಂತಿದ್ದ ಮೋಟಾರ್ ಕಾರಿನಲ್ಲಿ ಕುಳಿತರು; ಗಾಳಿಯ ವೇಗದಿಂದ ಮನೆಯ ಕಡೆಗೆ ಸಾಗಿದರು.

---

## ೩ನೆಯ ಪರಿಚ್ಛೇದ

ಅಪ್ಪಣರಾಯರು ಬೆಳ್ಳಿಕೋಟೆಯ ಜಹಾಗೀರುದಾರರು. ತಮ್ಮ ಮಗನ ವಿದ್ಯಾವ್ಯಾಸಂಗಕ್ಕಾಗಿ ಬೆಳ್ಳಿಕೋಟೆಯನ್ನು ಬಿಟ್ಟು ಬೆಳಗಾಂವಿಯಲ್ಲಿ ಮನೆಮಾಡಿದರು. ನಗರವಾಸದ ಸೊಗಸಿಗೆ ಮೆಚ್ಚಿ, ತಮ್ಮ ವಸತಿಯನ್ನು ಕೊನೆಯ ವರೆಗೆ ಅಲ್ಲಿಯೆ ಮಾಡಬೇಕೆಂಬ ಅಪೇಕ್ಷೆಯುಳ್ಳವರಾದರು. ಸಿರಿವಂತರ ಅಪೇಕ್ಷೆ ನೆರವೇರುವುದಕ್ಕೇನು ತಡ! ಬಸಿರಿದ್ದಾಕೆ ಹಡೆಯಲು ಬಯಸಿದರೆ ಅಸಾಧ್ಯವೇ? ಮೊಸರಿದ್ದಾಕೆ ಕಡೆಯಲು ಬಯಸಿದರೆ ಅಶಕ್ಯವೇ! ಬೆಳಗಾಂವಿಯ ನಗರವಿಸ್ತರಣ (ಎಕ್ಸ್ಟೆನ್ಶನ್) ದಲ್ಲಿ ರಾಯರು ಅರಮನೆಗೆ ಸರಿಸಮಾನವಾದ ಪ್ರಾಸಾದವನ್ನು ಕಟ್ಟಿಸಿದರು. ಸುತ್ತುಮುತ್ತಲೂ ಸುಂದರವಾದ ಕೈತೋಟವನ್ನು ಮಾಡಿಸಿದರು.

ಮರಳಿ ಹೋಗುವ ಅಪೇಕ್ಷೆಯಿರದಿದ್ದರೂ ರಾಯರಿಗೆ ತಮ್ಮ ಹುಟ್ಟಿದೂರಾದ ಬೆಳ್ಳಿಕೋಟೆಯ ಬಗೆಗೆ ಅಭಿಮಾನ ಬಹಳ. ಬೇಕಾದವರು

ಮನೆಗೆ ಬರಲಿ, ಬೆಳ್ಳಿಕೋಟೆಯು ತಮಗೆ ಉಂಬಳಿಯಾಗಿ ಸಿಕ್ಕ ಇತಿಹಾಸವನ್ನೂ ಅಲ್ಲಿಯ ಗ್ರಾಮದೈವತವಾದ ಭೈರವನ ಮಾಹಾತ್ಮ್ಯವನ್ನೂ ರಾಯರು ಅವರ ಕಿವಿಗಳಿಗೆ ಹತ್ತಿಸಿಯೆ ಬಿಡುವರು. ಅದನ್ನು ಮೊದಲ ನೆಯ ಸಲ ಕೇಳುವವರೇನೊ ಕುತೂಹಲಗೊಂಡು ಕೇಳುತ್ತಿದ್ದರು; ಆದರೆ ಮತ್ತೆ ಮತ್ತೆ ಅದನ್ನೇ ಕೇಳಬೇಕಾದ ಸಂದರ್ಭ ಆಗಾಗ ಒದಗಲು, ನಿರ್ವಾಹವಿಲ್ಲದೆ—ಕುತೂಹಲಭಾವವನ್ನು ಕೈಗಡ ತಂದುಕೊಂಡು—ಕೇಳಬೇಕಾಗುತ್ತಿದ್ದಿತು. ಸಿರಿವಂತರ ಮಾತುಗಳಿಗೆ ಬೇಸರುಪಟ್ಟು ಕೊಂಡರೆ ನಡೆದೀತೇ ?

ರಾಯರು ಕನ್ನಡಭಾಷೆ-ಬರೆಹಗಳ ವಿಷಯದಲ್ಲಿ ದ್ವೇಷಭಾವ ವನ್ನು ತೋರಿಸದಿದ್ದರೂ ಮರಾಟಿಭಾಷೆಯಲ್ಲಿಯೂ ಅದರ ಮೋಡಿ ಲಿಪಿಯಲ್ಲಿಯೂ ತುಂಬ ಆದರವನ್ನು ತೋರಿಸುವರು. 'ಮೋಡೀಲಿಪಿ ಯನ್ನು ಕಚೇರಿಗಳಲ್ಲಿ ಬಳಸಲಾಗದು' ಎಂದು ಸರಕಾರದವರು ಕಟ್ಟಳೆ ಮಾಡಿದುದು—ಬ್ರಾಹ್ಮಣರು ತ್ರಿಕಾಲಸಂಧ್ಯಾವಂದನೆಯನ್ನು ಮಾಡ ಲಾಗದು—ಎಂದು ಕಟ್ಟಳೆ ಮಾಡಿದಂತಹ ತಪ್ಪೆಂದು ರಾಯರ ಭಾವನೆ. ಯಾರು ಬಿಟ್ಟರೂ ಆ ಲಿಪಿಯನ್ನು ತಮ್ಮ ಕೈ ಬಿಡಲಾರದೆಂದು ಉಗ್ರ ಪ್ರತಿಜ್ಞೆಯನ್ನೇ ಅವರು ಮಾಡಿದ್ದರು. ತಮ್ಮ ಮಗ ಗಿರಿಧರನಿಗೆ, ಸುದರ್ಶನನಿಗೆ, ಮತ್ತೆ ಬೇರೆಯವರಿಗೆ ಕಾಗದ ಬರೆಯಬೇಕಾದರೆ ಮೋಡೀಲಿಪಿಯಲ್ಲಿಯೆ ಬರೆಯುವರು. ಗಿರಿಧರನಿಗೆ ಆ ಲಿಪಿಯನ್ನು ಕಂಡರೆ ಆಗದು; ಅದಕ್ಕೆ ಕಾರಣವೆಂದರೆ ಅವನಿಗದು ಬರುತ್ತಿರಲಿಲ್ಲ. ತಂದೆಯ ಕಾಗದವೆಂಬುದು ಲಿಪಿಯ ಮೇಲಿಂದಲೆ ಗೊತ್ತಾಗುತ್ತಿದ್ದಿತು. "ಸರಿ, ತಾವೇ ಕಾಗದ ಬರೆದಿದ್ದಾರೆಂದಮೇಲೆ ಕ್ಷೇಮದಿಂದಲೇ ಇದ್ದಾರೆ" ಎಂದು ಗಿರಿಧರನು ಆ ಕಾಗದವನ್ನು ಕಸದ ಬುಟ್ಟಿಗೆ ಕಳುಹಿಸಿ ಕೊಡುವನು. ಅದರಲ್ಲಿಯೂ ರಾಯರ ಲಿಪಿಯನ್ನು ಘುಣಾಕ್ಷರನ್ಯಾಯ ದಿಂದ ಕೂಡಿಸಿ ಕೂಡಿಸಿ ಓದಬೇಕಾದರೆ, ಸಾವಿರಾರು ವರುಷಗಳ ಹಿಂದಿನ ಶಿಲಾಶಾಸನಗಳನ್ನು ಓದುವಷ್ಟು ಪ್ರಯಾಸಪಡಬೇಕಾಗುತ್ತಿದ್ದಿತು.

ತಮ್ಮ ಹಳ್ಳಿಯಲ್ಲಿದ್ದ ಕನ್ನಡ ಶಾಲೆಯನ್ನು ತೆಗೆದು ಮರಾಟಿ ಶಾಲೆಯನ್ನು ಮಾಡಬೇಕೆಂದು ರಾಯರು ಅದೆಷ್ಟೊ ಹೆಣಗಿದರು.

ಆದರೆ ವಿದ್ಯಾಖಾತೆಯವರು ಅವರ ಮಾತನ್ನು ಅಲ್ಲಗಳೆಯುವ ಅಪರಾಧವನ್ನು ಮಾಡಿ, ರಾಯರ ಕೋಪಶಾಪಕ್ಕೆ ಗುರಿಯಾದರು. ನಿರ್ವಾಹವಿಲ್ಲದೆ ತಮ್ಮ ಹುಡುಗರನ್ನು ಕನ್ನಡ ಶಾಲೆಗೆ ಕಳುಹಬೇಕಾಯಿತೆಂದು ರಾಯರು– ಈಗಲೂ ಕೂಡ– ವ್ಯಸನದಿಂದ ಉಸಿರನ್ನು ಹಾಕುವರು. 'ತಾವೇ ಮನೆಯಲ್ಲಿ ಏತಕ್ಕಾಗಿ ಕಲಿಸಬಾರದು?'–ಎಂದು ಯಾರಾದರೂ ಕೇಳಬಹುದು; ಆದರೆ ತಮಗೆ ಮರಾಟೀ ಭಾಷೆ ಬರುತ್ತಿದ್ದರೆ ರಾಯರು ಕಲಿಸದೆ ಇರುತ್ತಿದ್ದರೇ? ಕ್ಷೇಮಸಮಾಚಾರದ ಕಾಗದ ಬರೆಯುವ ಕೆಲವು ಮಾತುಗಳನ್ನು ಅವರು ಚಿಕ್ಕತನದಲ್ಲಿಯೆ ಸಂಗ್ರಹಿಸಿ ಗಟ್ಟಿ ಮಾಡಿ ಇಟ್ಟುಕೊಂಡಿದ್ದರು. ಯಾರಿಗೆ ಕಾಗದ ಬರೆದರೂ ಅವಷ್ಟೇ ಮಾತುಗಳನ್ನು ಬರೆಯುವರು. ಒಂದು ತಮಾಷೆ! ರಾಯರು ಬರೆದ ಯಾವ ಕಾಗದವನ್ನೂ ನೋಡಬಹುದು; ಪ್ರತಿಯೊಂದರಲ್ಲಿಯೂ ಅಷ್ಟೇ ಮಾತುಗಳು, ಅಷ್ಟೇ ಸಾಲುಗಳು. ಒಂದೆ ಪಡಿಯಚ್ಚಿನಿಂದ ಹೊರಬಿದ್ದಂತಿರುವುವು. ಹೆಚ್ಚುಕಡಿಮೆಯಿದೆ–ಎಂದರೆ 'ತೀರ್ಥರೂಪ'ದ ಸ್ಥಳದಲ್ಲಿ 'ಚಿರಂಜೀವ' ಎಂದಿರಬಹುದು; 'ಸಮಸ್ಕಾರ' ಎಂದಿದ್ದಲ್ಲಿ 'ಆಶೀರ್ವಾದ' ಎಂದು ಬರೆದಿರಬಹುದು. ಯಾರಿಗಾದರೂ ಹೆಚ್ಚಿನ ಸಂಗತಿಯನ್ನೇನಾದರೂ ಬರೆದು ತಿಳುಹುವುದಿದ್ದಲ್ಲಿ, ರಾಯರು ತಾವೇ ಎಂದೂ ಕಾಗದ ಬರೆಯುತ್ತಿರಲಿಲ್ಲ; ಕಾರಕೂನನ ಕಡೆಯಿಂದಲೊ ಇನ್ನಾರ ಕಡೆಯಿಂದಲೊ ಬರೆಯಿಸುತ್ತಿದ್ದರು. ಆದರೆ ಪತ್ರವನ್ನು ಕನ್ನಡದಲ್ಲಿ ಬರೆದಿದ್ದರೂ ರಾಯರು ಅದರ ಕೊನೆಯಲ್ಲಿ '**ಆಪಲಾ ಅಪ್ಪಣರಾವ**' ಎಂದು ಮೋಡೀಲಿಪಿಯಲ್ಲಿ ಸಹಿಯನ್ನು ಮಾಡಿ, ತಮ್ಮ ಪ್ರತಿಜ್ಞೆಯನ್ನು ಪೂರ್ಣಗೊಳಿಸಿಕೊಳ್ಳುತ್ತಿದ್ದರು.

ಕಾರಕೂನ್ ರಾಮರಾಯರ ತಂದೆ 'ಮಗನು ಜ್ವರದಿಂದ ಮಲಗಿದ್ದಾನೆ, ಇಂದು ಬರಲಿಕ್ಕೆ ಆಗುವುದಿಲ್ಲ' ಎಂಬುದನ್ನು ತಿಳುಹಿಸಿ ಹೋಗಲಿಕ್ಕೆಂದು, ಈ ದಿನ ರಾಯರ ಮನೆಗೆ ಬಂದಿದ್ದರು. ರಾಮರಾಯನ ತಂದೆಯವರೂ ರಾಯರ ಸಮವಯಸ್ಸಿನವರೆ. ಡಾಕ್ಟರರನ್ನು ಕರೆದುಕೊಂಡು ಮನೆಗೆ ಬೇಗನೆ ಹೋಗಬೇಕಾಗಿದ್ದಿತಾದರೂ, ರಾಯರ ಮಾತುಗಳಿಗೆ ಮರುಳಾಗಿ ಆ ಮುಥುಕ ಹಾಗೆಯೆ ಕುಳಿತುಬಿಟ್ಟಿದ್ದರು.

'ಈತ ನಮ್ಮ ಕಾರಕೂನನ ತಂದೆ'—ಎಂದು ಯಾವ ಬಗೆಯ ಉಪೇಕ್ಷಾ-ಭಾವವನ್ನೂ ತೋರಿಸದೆ ರಾಯರು ನಾಲಗೆಯನ್ನು ನಡೆಯಿಸಿಯೇ ನಡೆಯಿಸಿದ್ದರು. ಮಾತಿಗೆ ಮಾತು ಹೊರಟು, ಬೆಳ್ಳಿಕೋಟೆಯ ಜಹಗೀರಿನ ವಿಷಯ ನಡೆಯಿತು. ರಾಯರಿಗೆ ಮೈಯಲ್ಲಿ ಮಿಂಚು ಮೂಡಿದಂತಾಗಿ ಮೈಯು ನವಿರೆದ್ದಿತು. ಅಭಿಮಾನದ ಧ್ವನಿಯಲ್ಲಿ ರಾಯರು ಮುದುಕನನ್ನು ಕೇಳಿದರು:

"ಬೆಳ್ಳಿಕೋಟೆಯ ಜಹಗೀರು ನಮ್ಮ ಮನೆತನಕ್ಕೆ ಹೇಗೆ ಸಿಕ್ಕಿತೆಂಬುದು ನಿಮಗೆ ಗೊತ್ತಿದೆಯೇನು?"

"ಇಲ್ಲ! ಗೊತ್ತಿಲ್ಲ ರಾಯರೇ!"

"ಛೇ..ನಿಮ್ಮ ವಂಚಾಳ ಹೋಗಲಿ! ಅದನ್ನು ನೀವು ಕೇಳಿಯೇ ತೀರಬೇಕು. ನೋಡ್ರಿ! ಮೊದಲು ನಮ್ಮ ಮನೆತನದವರು ಅಲ್ಲಿಯ ಭೈರವದೇವರ ಉಪಾಸಕರು. ನಮ್ಮ ಭೈರವದೇವರೆಂದರೆ ಏನು ಕೇಳು ತ್ತೀರಿ, ಅಂತಿಂತಹ ದೇವತೆಯಲ್ಲ ಅವನು; ಅಸಾಧ್ಯ ದೇವತೆ! ತನಗೆ ಬೇಕಾದವರನ್ನು ಸ್ವರ್ಗದ ಶಿಖರಕ್ಕೇರಿಸುತ್ತಾನೆ, ಬೇಡವಾದವರನ್ನು ಹಾಕಿ—ವಾಮನನು ಬಲಿಯನ್ನು ಮೆಟ್ಟಿದಂತೆ—ಪಾತಾಳಕ್ಕೆ ಇಳಿಸು ತ್ತಾನೆ. ಒಂದುಸಲ ಏನು ತಮಾಷೆಯಾಯಿತೆಂದಿರಿ; ಒಬ್ಬ ಕಿರಸ್ತಾನ ಪಾದರಿ ನಮ್ಮೂರಿಗೆ ಬಂದ; ಜನರಿಗೆ ಉಪದೇಶ ಮಾಡುತ್ತ ಮಾಡುತ್ತ ನಮ್ಮ ಹಿಂದೂಧರ್ಮದ ಇನ್ನಿತರ ದೇವತೆಗಳನ್ನು ನಿಂದಿಸಿದಂತೆಯೆ ನಮ್ಮ ಭೈರವದೇವರನ್ನೂ ನಿಂದಿಸಿದ. ಅಂದು ಸಂಜೆಯೊಳಗಾಗಿಯೇ ಆತನನ್ನು ನಾಗರಹಾವು ಕಚ್ಚಬೇಕೇ? ಮೊದಲೇ ನಮ್ಮೂರಿನ ಹಾವು ಗಳು ಪ್ರಸಿದ್ಧ; ಪ್ರತಿವರ್ಷವೂ ನಾಲ್ಕಾರು ಜನರ ಬಲಿಗಳನ್ನು ತೆಗೆದು ಕೊಳ್ಳುತ್ತಲೇ ಇರುತ್ತವೆ. ಅಂದು ಆ ಪಾದ್ರೀ ನೋಡಿರಿ, ಹಾವು ಕಚ್ಚಿದ ಒಂದೇ ಒಂದು ಗಂಟೆಯಲ್ಲಿ ಇದ್ದನೋ ಇಲ್ಲವೋ! ನಮಗೆಲ್ಲ ಆಶ್ಚರ್ಯವೆನಿಸಿಬಿಟ್ಟಿತು."

"ಆಶ್ಚರ್ಯವೆನಿಸದೆ ಏನು ಮಾಡೀತು! ಭೈರವ ತಕ್ಕ ಪ್ರಾಯ ಶ್ಚಿತ್ತವನ್ನು ಕೊಟ್ಟ ನೋಡ್ರಿ" ಮುದುಕ ಮಾತನಾಡಿದ.

"ಇನ್ನೂ ಮುಂದೆ ಕೇಳಿರಿ; ಒಂದುಸಲ ನಮ್ಮೂರಿನ ಒಬ್ಬ ರೈತ ಹೊಲದ ರಾಶಿಯನ್ನು ಮಾಡುವಾಗ, ಭೈರವನಿಗೆ ನೈವೇದ್ಯ ಕೊಡುವುದನ್ನೇ ಮರೆತ. ಕೇಳುತ್ತೀರೇನು! ಮರುದಿನ ಮಧ್ಯಾಹ್ನದೊಳಗಾಗಿಯೆ ಆತನ ಹೆಂಡತಿ ಚಳಿಜ್ವರ ಬಂದು ಬಿದ್ದರೆ ಇನ್ನೇನು ಹೇಳಲಿ! ಆ ರೈತ ಓಡಿಬಂದ ನಮ್ಮ ಸುದರ್ಶನನ ಕಡೆಗೆ. ಸರಿ; ಸುದರ್ಶನ ಏನೇನೋ ನಾಲ್ಕಾರು ಗುಳಿಗೆಗಳನ್ನು ಕೊಟ್ಟ. ಆಗ ರೈತನಿಗೆ ನಾನೇ 'ಮೂರ್ಖಾ! ಭೈರವ ದೇವರು ಸಿಟ್ಟುಗೊಂಡಿದ್ದುದರ ಲಕ್ಷಣವಿದು. ನೀನು ಔಷಧವನ್ನು ಹಾಕಲೊಲ್ಲೆಯೇಕೆ, ಮೊದಲು ಭೈರವನ ಹೆಸರನ್ನು ತೆಗೆದುಕೊಂಡು ಹಾಕು!' ಎಂದು ಹೇಳಿದೆ. ರೈತ ನಾನು ಹೇಳಿದಂತೆಯೇ ಮಾಡಿ ಔಷಧಿಯನ್ನು ಕೊಟ್ಟ. ಮರುದಿವಸ ಜ್ವರ ಬಂದೀತೇನು! ಹೇಳದೆ ಕೇಳದೆ ಓಡಿಹೋಗಿ ಬಿಟ್ಟಿತು!"

"ಅಬ್ಬಾ! ತುಂಬ ಜಾಗೃತಸ್ಥಾನವೆಂದು ಕಾಣುತ್ತದೆ!"

"ಜಾಗೃತಸ್ಥಾನವೆಂದರೆ ಇನ್ನೂ ಕೇಳುತ್ತೀರೇನು ಮತ್ತೆ! ಮೊದಲು ಆ ದೇವರ ಮಾಹಾತ್ಮ್ಯದಿಂದ ನಮ್ಮ ಗ್ರಾಮದ ಸುತ್ತು-ಗೋಡೆಯೆಲ್ಲ ಬೆಳ್ಳಿಯದಾಗಿ ಕಾಣುತ್ತಿದ್ದಿತಂತೆ. ಎಂತಲೇ ಅದಕ್ಕೆ ಬೆಳ್ಳಿಕೋಟೆಯೆಂದು ಹೆಸರು ಬಂದಿದೆ. ಇಲ್ಲದಿದ್ದರೆ ಸುಮ್ಮನೆ ಬರುತ್ತಿದ್ದಿತೇನು? ಕಲಿಕಾಲ ಹೆಚ್ಚಾದಂತೆ ಬೆಳ್ಳಿಯ ಕೋಟೆಯೆಲ್ಲ ಕಲ್ಲು-ಮಣ್ಣಿನ ಕೋಟೆಯಾಗಿ 'ಬೆಳ್ಳಿಕೋಟೆ' ಎಂಬ ಹೆಸರು ಮಾತ್ರ ಉಳಿದುಕೊಂಡಿದೆ.

"ತ್ಚ್ ತ್ಚ್! ಅಯ್ಯೋ, ಕಲಿಯುಗ ಏನೇನು ಮಾಡಿತು ರಾಯರೇ! ನಾವು ನೋಡುತ್ತಿದ್ದ ಹಾಗೆಯೆ ಮೊದಲಿನಂತೆ ಈಗ ಹಣ್ಣುಗಳಿಗೆ ರುಚಿಯಿಲ್ಲ, ಹೂಗಳಲ್ಲಿ ವಾಸನೆಯಿಲ್ಲ, ಹಸುಗಳ ಮೊಲೆಯಲ್ಲಿ ಹಾಲಿಲ್ಲ. ಇನ್ನೂ ಎಂತೆಂತಹ ಕಾಲವನ್ನು ಈ ಕಣ್ಣುಗಳಿಂದ ಕಾಣಬೇಕಾಗಿದೆಯೊ ನಾವು!" ಮುದುಕನು ಮರುಕದ ದನಿಯಲ್ಲಿ ಹೇಳಿದ.

"ನೋಡ್ರಿ, ಅಂತಹ ಭೈರವದೇವರ ಉಪಾಸಕರು ನಮ್ಮ ಅಜ್ಜನ ಮುತ್ತಜ್ಜ. ನಮ್ಮಿಂದ ಏಳುತಲೆಗೆ ಹಿಂದಿನವರು ಇಷ್ಟೇ! ಭೈರವನ ಅನುಗ್ರಹದಿಂದ ಅವರು ಹನುಮಂತನ ಹಾಗೆ ವಜ್ರದೇಹವನ್ನು

ಪಡೆದಿದ್ದರಂತೆ. ಭೀಮಣಬಹದ್ದೂರರೆಂದು ಅವರಿಗೆ ಹೆಸರು. ನನ್ನ ಮಗ ಗಿರಿಧರನಿಗೆ ಅದೇ ಹೆಸರನ್ನು ಇಡಬೇಕೆಂದು ಅಪೇಕ್ಷೆ ಇದ್ದಿತು. ಆದರೆ ಹೆಂಗುಸರನ್ನೇನು ಕೇಳುತ್ತೀರಿ; 'ಗಿರಿಧರ' ಎಂದು ಹೆಸರಿಟ್ಟುಬಿಟ್ಟರು."

"ಹೊಸಕಾಲ ರಾಯರೇ! ಕಾಲಕ್ಕೆ ತಕ್ಕ ಹೆಸರು ಬೇಕಲ್ಲವೇ?"

"ನೋಡ್ರಿ, ಭೀಮಣಬಹದ್ದೂರರ ಮೈಗೆ ತಗುಲಿದೊಡನೆಯೆ ಕಡಿದ ಕತ್ತಿ, ಹೊಡೆದ ಗುಂಡು ಪುಡಿಪುಡಿಯಾಗಿ ಹೋಗುತ್ತಿದ್ದುವಂತೆ. ವಿಜಯನಗರದ ಕೃಷ್ಣದೇವರಾಯರು ವಿಜಾಪುರದವರಿಂದ ಮುದಗಲ್ಲು ಕೋಟೆಯನ್ನು ಕಿತ್ತುಕೊಳ್ಳುವಾಗ, ಘನಘೋರ ಕಾಳಗವಾಯಿತಂತೆ. ಅದರಲ್ಲಿ ನಮ್ಮ ಅಜ್ಜ ತೋರಿಸಿದ ಸಾಹಸ ಆಶ್ಚರ್ಯಕಾರಕವಾಗಿದ್ದಿತಂತೆ. ಕೃಷ್ಣದೇವರಾಯರ ಮೈಮೇಲೆ ಏರಿಹೋಗುತ್ತಿದ್ದ ಹದಿಮೂರು ಆನೆಗಳನ್ನು, ನಮ್ಮ ಆ ಹಿರಿಯರು ಒಂದೊಂದೇ ಗುದ್ದಿನಿಂದ ಕೊಂದುಬಿಟ್ಟರಂತೆ. ರಾಯರು ಅವರ ಪರಾಕ್ರಮಕ್ಕೆ ಮೆಚ್ಚಿ, ಬೆಳ್ಳಿಕೋಟೆಯನ್ನೂ ಅದರ ಬಳಿಯಲ್ಲಿಯ ಒಂಬತ್ತು ಹಳ್ಳಿಗಳನ್ನೂ ಹಗಲುದೀವಟಿಗೆಯ ಬಿರುದಿನೊಂದಿಗೆ ನಮ್ಮ ಮನೆತನಕ್ಕೆ ಉಂಬಳಿ ಹಾಕಿಕೊಟ್ಟರಂತೆ. ನೀವು ಬೇಕಾದರೆ ಒಂದುಸಲ ನನ್ನೊಡನೆ ಬೆಳ್ಳಿಕೋಟೆಗೆ ನಡೆಯಿರಿ. ಭೈರವನ ದರ್ಶನ ತೆಗೆದುಕೊಂಡು ಬಂದೀರಂತೆ.

"ಆಗಲಿ ರಾಯರೇ, ಸಂತೋಷ! ಅವಶ್ಯವಾಗಿ ಬರುತ್ತೇನೆ. ನಾನೀಗ ಡಾಕ್ಟರ ಮನೆಗೆ ಹೋಗಬೇಕಾಗಿದೆ, ಹೊರಡಲೇ?"

"ಓಹೋ, ಹೊರಟುಬಿಡಬಹುದು. ಈಹೊತ್ತೇ ಮುಂಬಯಿಯಿಂದ. .ತಮ್ಮ ಪರೀಕ್ಷೆ ತೀರಿಸಿಕೊಂಡು ನಮ್ಮ ಗಿರಿಧರ, ಸುದರ್ಶನ ಇಲ್ಲಿಗೆ ಬಂದಿದ್ದಾರೆ; ಅವರ ಪರಿಚಯ ನಿಮಗೆ ಇರಬಹುದು. ಗಿರಿಧರ ನನ್ನ ಮಗನೆಂಬ ಮಾತು ನಿಮಗೆ ತಿಳಿದಿರಬಹುದು. ಸುದರ್ಶನ ನಮ್ಮ ದೂರದ ದಾಯಾದಿಯೊಬ್ಬನ ಮಗ. ಚಿಕ್ಕತನದಲ್ಲಿಯೆ ತಂದೆ-ತಾಯಿ ಇಬ್ಬರೂ ತೀರಿಹೋದುದರಿಂದ, ನಾನೇ ಅವನನ್ನು ಸಾಕಿಸಲಹಿದ್ದೇನೆ. ವಿದ್ಯಾಭ್ಯಾಸಂಗವನ್ನೂ ಮಾಡಿಸಿದ್ದೇನೆ. ಒಳ್ಳೆಯ ಹುಡುಗ ನೋಡಿರಿ! ಭಲು ಬುದ್ಧಿಶಾಲಿ! ವೈದ್ಯಕವನ್ನಂತೂ ಅದೆಲ್ಲಿ ಕಲಿತುಕೊಂಡಿದ್ದಾನೊ; ಬೇಕಾದಂತಹ ರೋಗವನ್ನೂ ಕಳೆದುಬಿಡುತ್ತಾನೆ. ಬೇಕಾದರೆ ನಾಳೆ

ನಾಡಿದ್ದು ಇಷ್ಟರಲ್ಲಿಯೆ ರಾಮರಾಯನ ಪ್ರಕೃತಿಯನ್ನು ತೋರಿಸಲಿಕ್ಕೆ ಆತನನ್ನು ಕರೆದುಕೊಂಡು ಹೋಗಬಹುದು ನೀವು!"

"ಆಗಲಿ ರಾಯರೆ ಬರುತ್ತೇನೆ" ಎಂದು ನುಡಿದು ಮುದುಕನು ಎದ್ದು ಹೊರಟ. ರಾಯರಿಗೆ ಇನ್ನೂ ಏನೇನು ಮಾತನಾಡಬೇಕಾಗಿದ್ದಿತೋ; ಅತೃಪ್ತಭಾವದಿಂದಲೆ ಅವನನ್ನು ಬೀಳ್ಕೊಟ್ಟರು. ಗಿರಿಧರ-ಸುದರ್ಶನರು ಊರಿಂದ ಬಂದ ಆನಂದವು ಮಾತಿನ ಹೊಳೆಯಾಗಿ ಹರಿಯಬೇಕೆಂದರೆ, ಅದನ್ನು ಒಳಗೊಳ್ಳುವಂತಹ ಸರಿತ್‌ಪತಿಯೇ ರಾಯರಿಗೆ ಸಿಕ್ಕದಾಗಿದ್ದನು. ಅವರ ಮನದ ಉತ್ಸಾಹವು ಈಗ ತಾಂಬೂಲದ ಡಬ್ಬಿಯನ್ನು ಮುಂದಕ್ಕೆ ಎಳೆದುಕೊಂಡಿತು.

---

## ೪ನೆಯ ಪರಿಚ್ಛೇದ

ಹಗಲು ನಾಲ್ಕು ಗಂಟೆಯ ಸಮಯ; ಉಪ್ಪರಿಗೆಯ ದಿವಾಣ-ಖಾನೆಯಲ್ಲಿ ಸುದರ್ಶನನೂ ಉಷೆಯೂ ಚದುರಂಗದಾಟವನ್ನಾಡುತ್ತಿದ್ದಾರೆ. ಮಧ್ಯದ ಮೇಜಿನ ಮೇಲೆ ಚದುರಂಗದ ಪಟ್ಟ. ಎದುರು ಎದುರಿನ ಕುರ್ಚಿಗಳ ಮೇಲೆ ಆಟಗಾರರಿಬ್ಬರೂ ಕುಳಿತುಕೊಂಡಿದ್ದಾರೆ. ಉಷೆಯ ಕಡೆಗೆ ಒಂದು ಆನೆ, ವಜೀರ, ಮೂರು ಪ್ಯಾದೆಗಳು ಇಷ್ಟೇ ಉಳಿದಿವೆ; ಸುದರ್ಶನನ ಆಟವೂ ಅಷ್ಟೇನು ಹೆಚ್ಚಾಗಿ ಉಳಿದಿರಲಿಲ್ಲ. ಉಷೆಗಿಂತ ಹೆಚ್ಚಿಗೆ ಎಂದರೆ ಒಂದು ಕುದುರೆ, ಒಂದು ಒಂಟೆ ಇದ್ದುವು. ಆದರೇನು ಉಷೆಯದು ಬಿದ್ದ ಆಟ. ಒಂದೊಂದು ಸಲ ಆಕೆಯ ಮುಖದ ಮೇಲೆ ಸೋಲಿನ ಭೀತಿ ಸುಳಿಯುವುದು; ಮತ್ತೆ ಒಂದೊಂದು ಸಲ, ಸುದರ್ಶನನು ಆಟವಾಡುವ ನೈಪುಣ್ಯಕ್ಕೆ ಬೆರಗುಗೊಂಡ ಭಾವವು ತಲೆದೋರುವುದು. ಅದೆಷ್ಟೊ ಎಚ್ಚರದಿಂದ ಆಡುತ್ತಿದ್ದರೂ ಉಷೆಯ ಆನೆ ವೀರೆಯದಲ್ಲಿ ಸಿಕ್ಕಿಕೊಂಡಿತು. ಅರಸನಿಗೆ ಒಂಟೆಯಿಂದ ಶಹವು ಹತ್ತಿತಲ್ಲದೆ, ವಜೀರನು ಒಂಟೆಯಿಂದ ಸಾಯುವಂತಹ ಸಂದರ್ಭವೊದಗಿತು. ಉಷೆಯು ಅರಸನನ್ನು ಶಹದಿಂದ

ತಪ್ಪಿಸಿದಳು. ವಜೀರನು ಒಂಟಿಗೆ ತುತ್ತಾದನು. ಎಂತಹ ಶಕ್ತಿ–ಯುಕ್ತಿ ಗಳಿದ್ದರೆ ಏನಾಯಿತು; ನಸುವೆ ಅಚಾತುರ್ಯ ನಡೆದರೆ ಕ್ಷುದ್ರಜಂತುವಿನೆದುರೂ ಆ ಶಕ್ತಿ ಯುಕ್ತಿಗಳು ನಿಲ್ಲಲಾರವೆಂಬ ಕಂಡುಂಡ ಸಂಗತಿಯು ಈ ಆಟದಲ್ಲಿಯೂ ಸಿದ್ಧವಾಗಿಹೋಯಿತು.

ಸುದರ್ಶನನು ಒಂಟಿಯನ್ನೆತ್ತಿ ವಜೀರನನ್ನು ಹೊಡೆಹೊಡೆಯುತ್ತಲೆ ಕೇಳಿದನು :

"ನಾಲ್ಕು ಹೊಡೆದು ಹೋಯಿತು; ಗಿರಿಧರ ಇನ್ನೂ ಏಳಲಿಲ್ಲವೆ ?"

"ಅದೇನೋ, ಇಷ್ಟು ಹೊತ್ತು ಮಲಗಿದ್ದಾನೆ !"

ಉಷೆಯು ಮಾತನಾಡುತ್ತಿರುವಾಗಲೆ ಗಿರಿಧರನು ಅಲ್ಲಿಗೆ ಬಂದೇಬಿಟ್ಟ. ಉಷೆಯು ನಗುನಗುತ್ತ ಹೇಳಿದಳು:

"ಗಿರಿಧರ, ನಿನಗೆ ನೂರುವರುಷಗಳ ಆಯುಷ್ಯನೋಡು. ಇದೀಗಲೆ ನಿನ್ನ ನೆನಪನ್ನು ತೆಗೆದಿದ್ದೆವು. ನಮ್ಮ ನೆನಪಿನೊಡನೆಯೆ ನೀನಿಲ್ಲಿಗೆ ಬಂದೆ."

"ಇಷ್ಟಕ್ಕಾಗಿ ನನ್ನ ಆಯುಷ್ಯ ನೂರುವರ್ಷ ಎಂದು ಭಾವಿಸಿದೆಯೇನು ? ನನಗೆ ನೂರು ವರ್ಷದ ಆಯುಷ್ಯವನ್ನು ಕೊಡದಿದ್ದರೆ ಆ ಚತುರ್ಮುಖನ ಹಣೆಯಬರೆಹವಾದರೂ ಏನಾದೀತು !"

"ಇನ್ನೇನಾಗುವುದು ! ಹಿಂದಕ್ಕೆ ಮಹಾದೇವನೊಡನೆ ವಿರೋಧ ಕಟ್ಟಿ ಪಂಚಮುಖನಿದ್ದವನು ಚತುರ್ಮುಖನಾದನಂತೆ; ಈಗ ನಿನ್ನೊಡನೆ ವಿರೋಧವನ್ನು ಬೆಳೆಯಿಸಿ ತ್ರಿಮುಖನಾದಾನು. ಇಷ್ಟೇಯೋ ಇದಕ್ಕೂ ಹೆಚ್ಚಾದ ಶಿಕ್ಷೆ ಮಾಡಿ, ಶಂಕರನಿಗಿಂತ ಶ್ರೇಷ್ಠನೆನಿಸಿಕೊಳ್ಳುವವನಿದ್ದೀಯೋ" ಸುದರ್ಶನನು ನಗುತ್ತ ನುಡಿದ.

"ಬ್ರಹ್ಮನ ಗೊಡವೆಗೆ ಹೋದುದಕ್ಕಾಗಿ ಮಹಾದೇವನಂತಹ ಮಹಾದೇವನಿಗೂ ತಲೆಬುರುಡೆ ಹಿಡಿದು ಭಿಕ್ಷೆಬೇಡಬೇಕಾಯಿತು ; ನೋಡು ಗಿರಿಧರ ! ಬ್ರಹ್ಮನೊಡನೆ ಜಗಳವಾಡುವುದಿದ್ದರೆ ಎಚ್ಚರದಿಂದ ಜಗಳವಾಡು !" ಉಷೆಯೂ ಮೆಲುನಗೆ ನಗುತ್ತ ನುಡಿದಳು.

" ಅಂತಹ ವೇಳೆಯೊದಗಿದಾಗ ನಿನಗೆ ಗೊತ್ತಾಗುವುದು." ಎಂದು ಹೇಳುತ್ತ ಗಿರಿಧರನೂ ಒಂದು ಕುರ್ಚಿಯ ಮೇಲೆ ಕುಳಿತುಕೊಂಡ. ಉಷಾ-ಸುದರ್ಶನರು ಮತ್ತೆ ಆಟದಲ್ಲಿ ಆಸಕ್ತರಾದರು. ಏನೇ ಆದರೂ ಪ್ಯಾದೇಮಾತು ಆಗಗೊಡಬಾರದೆಂದು ಉಷೆಯ ನಿಶ್ಚಯ ; ಪ್ಯಾದೇಮಾತು ಮಾಡಿಯೇ ತೀರಬೇಕೆಂದು ಸುದರ್ಶನನ ನಿರ್ಣಯ. ಆಟ ನಡೆದಿದ್ದಿತು ; ಗಿರಿಧರನು ನಡುವೆ ಒಂದೆರಡು ಸಲ ಏನೇನನೋ ಮಾತ ನಾಡಿಸಿದರೆ ಉತ್ತರ ಕೊಡಬೇಕೆಂಬ ಅರಿವು ಉಷೆಗೂ ಇಲ್ಲ ; ಸುದರ್ಶನ ನಿಗೂ ಇಲ್ಲ. ಇಬ್ಬರೂ ತಮ್ಮ ತಮ್ಮ ವಿಚಾರಗಳಲ್ಲಿ ಮಗ್ನರು. ತನ್ನ ಮಾತಿಗೆ ಮಾರುಬಾರದುದರಿಂದ ಗಿರಿಧರನ ಮುಖದಲ್ಲಿ ಕ್ರೋಧಪೂರಿತ ಅಭಿಮಾನದ ಕೆಮ್ಮೋಡವು ಕಾಣಿಸಿಕೊಂಡಿತು; ಮತ್ತೆ ನಿಧಾನವಾಗಿ ಒಳಗೆಯೆ ಅಡಗಿಕೊಂಡಿತು. ಅರ್ಧಗಂಟೆಯವರೆಗೆ ಸುಮ್ಮನೆ ಕುಳಿತು ಕೊಂಡಿದ್ದ. ಕೊನೆಗೆ " ಇದೇನಿದು, ಸುಡುಗಾಡು ಮೂಕದೆವ್ವ ಗಳಾಟ ! " ಎಂದು ನುಡಿದವನೆ ಗಿರಿಧರ ಪಟ್ಟವನ್ನು ಮಗುಚಿಹಾಕಿಬಿಟ್ಟ. ಉಷಾ-ಸುದರ್ಶನರು ಹಾರಿಬಿದ್ದರು. ಹೀಗೆ ಹೀಗೆ ಸಂಸಾರ ಸಾಗಿಸ ಬೇಕೆಂದು ಮೊದಲೇ ಎಣಿಕೆ ಹಾಕಿಟ್ಟುಕೊಂಡಿದ್ದ ಸಂಸಾರಪ್ರಿಯನಿಗೆ ಒಮ್ಮೆಲೆ ಪ್ರಾಣಾಪಾಯವೊದಗಿದಂತೆ—ಹೀಗೆ ಹೀಗೆ ಕಾಯಿಗಳನ್ನು ನಡೆಯಿಸಬೇಕೆಂದು ಹಾಕಿಟ್ಟುಕೊಂಡಿದ್ದ ಅವರಿಬ್ಬರ ಹಂಚಿಕೆಗಳಿಗೂ ತಟ್ಟನೆ ಆಘಾತವೊದಗಿತು. ಇಬ್ಬರೂ ವಿಷಾದದ ನಗೆ ನಗುತ್ತ ನುಡಿದರು:

" ಅಯ್ಯೋ, ಆಟವು ಅದೆಷ್ಟು ಸೊಗಸಾಗಿ ಸಾಗಿದ್ದಿತು ! "

" ಸರಿ ! ನಿಮ್ಮ ಆಟ ನನಗೆ ಪ್ರಾಣಸಂಕಟವಾಗಿದ್ದಿತು ! " ಗಿರಿಧರನು ನುಡಿದ.

ಯಾರೋ ಉಪ್ಪರಿಗೆಯ ಮೆಟ್ಟಿಲನ್ನೇರಿ ಬರುವ ಶಬ್ದ ಕೇಳಿಸಿತು. ' ಅದಾರು ? ' ಎಂಬ ಆತುರಭಾವದಿಂದ ಎಲ್ಲರೂ ಅತ್ತಕಡೆಗೆ ನೋಡು ತ್ತಿರಲು, ಪ್ರಭೆಯು ಉಲ್ಲಾಸದ ನಗೆಮೊಗದಿಂದ ಅಲ್ಲಿಗೆ ಬಂದಳು. ಎಲ್ಲರೂ ಸಂತೋಷದ ಸ್ವಾಗತವೀಯುತ್ತಿರಲು, ಗಿರಿಧರನ ಕುರ್ಚಿಗೆದು ರಾಗಿದ್ದ ಕುರ್ಚಿಯಮೇಲೆ ಅವಳು ಬಂದು ಕುಳಿತುಕೊಂಡಳು.

"ಚದುರಂಗದಾಟ ನಡೆದಿದ್ದಿತೇನು?" ಗಾಂಭೀರ್ಯದ ನಗೆಯಿಂದ ಪ್ರಭೆಯು ಕೇಳಿದಳು.

"ಹೌದಮ್ಮಾ ನಡೆದಿತ್ತು. ಗಿರಿಧರನು ಬಂದು ಆಟವನ್ನು ಕೆಡಿಸಿಬಿಟ್ಟ ನೋಡು!" ಉಷಾ ವಿಷಾದದ ಸ್ವರದಲ್ಲಿ ನುಡಿದಳು.

"ಒಳ್ಳೆಯುದನ್ನು ಮಾಡಿದ; ನನಗಂತೂ ಈ ಆಟವೆಂದರೆ ಇಲ್ಲದ ತಲೆನೋವು ಬಂದುಬಿಡುತ್ತದೆ." ಪ್ರಭೆಯು ಕೃತಜ್ಞತೆಯ ಕಣ್ಣುಗಳಿಂದ ಗಿರಿಧರನ ಕಡೆಗೆ ನೋಡಿದಳು.

"ನಿನಗೆ ಬೇಡವಾದುದಕ್ಕೆಲ್ಲ ನಿನಗೆ ತಲೆನೋವು!" ಉಷೆಯು ನುಡಿದಳು.

ಪ್ರಭೆಯು ಆ ಮಾತಿನ ಕಡೆಗೆ ಲಕ್ಷ್ಯವನ್ನು ಕೊಡದೆ, ಗಿರಿಧರನನ್ನು ಕೇಳಿದಳು:

"ಮುಂಬಯಿಂದ ಅಪರೂಪವಾದ ಒಡವೆಗಳನ್ನೇನೂ ತಂದಿಲ್ಲವೇ ಈ ಸಲ?"

"ತರದೇ ಏನು! ಮುಂಬಯಿಯ ಪೇಟೆಯನ್ನೇ ಕೊಂಡುಕೊಂಡು ಬಂದಿದ್ದೇನೆ. ಉಷಾ, ನಿನಗಾಗಿ ಸುಂದರವಾದ ಕರವಸ್ತ್ರವೊಂದನ್ನು ತಂದಿದ್ದೇನೆ." ಒಂದು ವಿಧವಾದ ಆಶೆ ತುಂಬಿದ ನೋಟದಿಂದ ಉಷೆಯ ಕಡೆಗೆ ನೋಡುತ್ತ ಗಿರಿಧರನು ನುಡಿದ. ಉಷೆಯ ಮುಖದಲ್ಲಿ ಯಾವ ಬಗೆಯ ಮಾರ್ಪಾಡೂ ಕಂಡುಬರಲಿಲ್ಲ. ತೆರೆದ ಬಾಯಿಂದ ಪ್ರಭೆಯು ಕೇಳಿದಳು:

"ನನಗಾಗಿ ಏನು ತಂದಿದ್ದೀಯೆ?"

"ಏನನಾದರೂ ತರಬೇಕೆಂದು ಎರಡುನ್ನೂರು ಸಲ ಜ್ಞಾಪಕಕ್ಕೆ ಬಂದಿದ್ದಿತು. ಬರುವಾಗ ಅವಸರದಲ್ಲಿ ಮರೆತುಬಿಟ್ಟೆ ನೋಡು ಪ್ರಭಾ!"

ಪ್ರಭೆಯು ಇಳಿಮೊಗದವಳಾದಳು. ಸುದರ್ಶನನು ಆತುರದಿಂದ ಕೇಳಿದ:

"ಉಷೆಗಾಗಿ ಕರವಸ್ತ್ರ ತಂದಿದ್ದೀಯಾ? ಏನಪ್ಪಾ, ಅಲ್ಲಿಂದ ಇಲ್ಲಿಯವರೆಗೂ ಜೊತೆಗೊಂಡು ಬಂದಿದ್ದೇವೆ; ನನಗದನ್ನು ತೋರಿಸಿಯೇ ಇಲ್ಲವಲ್ಲ!"

'ಏನೋ, ಇಲ್ಲಿಗೆ ಬಂದಮೇಲೆಯೆ ತೋರಿಸಿದರಾದೀತೆಂದು ಬಿಟ್ಟೆ. . ಆಯಿತು."

"ಎಲ್ಲಿ! ಆ ವಸ್ತ್ರವನ್ನು ನೋಡೋಣ!" ಪ್ರಭೆಯು ತವಕ-ಗೊಂಡು ಕೇಳಿದಳು.

ಗಿರಿಧರನು ಎದ್ದು ತನ್ನ ಕಿರುಮನೆಗೆ ಹೋದ. ಅರೆನಿಮಿಷದಲ್ಲಿಯೇ ಮೆರುಗಿನ ಕಾಗದದಲ್ಲಿ ಮರೆಗೊಂಡ ವಸ್ತ್ರದ ಮಡಿಕೆಯೊಂದನ್ನು ಕೈಯಲ್ಲಿ ಹಿಡಿದುಕೊಂಡು ಬಂದ. ಬರುಬರುತ್ತಿರುವಾಗಲೆ ಮಾತನಾಡಿದ :

"ಉಷೆಗೆ ಸ್ವದೇಶೀ ಪದಾರ್ಥಗಳ ಮೇಲೆ ಇಷ್ಟವೆಂದು, ನಮ್ಮಲ್ಲಿಯೆ ಸಿದ್ಧವಾದುದನ್ನು ತಂದಿದ್ದೇನೆ. ಮೈಸೂರಿನ ರೇಶಿಮೆಯ ವಸ್ತ್ರವಿದು. ಮೇಲಿನ ನಕ್ಷೆಯನ್ನು ಇಂದೂರಿನ ಒಬ್ಬ ಹೆಣ್ಣುಮಗಳು ತೆಗೆದಿದ್ದಾಳೆ. ನೋಡಿದ ಕೂಡಲೆ ನನಗೆ ಬಿಡುವ ಮನಸ್ಸೇ ಆಗಲಿಲ್ಲ. ಉಷೆಯ ಸಲುವಾಗಿ ತೆಗೆದುಕೊಂಡೇ ಬಿಡಬೇಕೆಂದು ನನಗೆ ಎನಿಸಿತು!"

"ಸರಿಯಪ್ಪಾ! ಎಲ್ಲರೂ ಇಷ್ಟೊಂದು ವಿಶ್ವಾಸವನ್ನು ತೋರಿಸತೊಡಗಿದರೆ, ವಿಶ್ವಾಸದ ಅಜೀರ್ಣವಾದೀತು ಮತ್ತೆ ನನಗೆ!" ಉಷಾ ನಗುತ್ತ ನುಡಿದಳು.

ಗಿರಿಧರನು ತೆಳುಗಾಗದದಲ್ಲಿ ಮಡಿಸಿದ ವಸ್ತ್ರವನ್ನು ಹೊರಕ್ಕೆ ತೆಗೆದ. ಎಲ್ಲರೂ ಆತುರದಿಂದ ಅದನ್ನು ನೋಡುತ್ತಿದ್ದರು. ಮುಗಿಲು-ಬಣ್ಣದ ವಸ್ತ್ರ. ಬಿಚ್ಚಿದರೆ ಒಂದುಮರೆ ಮೊಳದ ಚಚ್ಚೌಕ. ಸಣ್ಣಗಿನ ಜರಿಯಿಂದ ಮಾಡಿದ ನಕ್ಷೆಯ ಕೆಲಸವು ನೋಟಕರ ಕಣ್-ಮನಗಳನ್ನು ಸೆಳೆಯುತ್ತಿದ್ದಿತು. ನಾಲ್ಕೂಕಡೆಯ ಸುಳಿವಿನ ಬಳ್ಳಿ, ನಡುವೆ ಲತಾ-ಕುಂಜವೊಂದರಲ್ಲಿ ಕುಳಿತಿರುವ ಗೋಪವಧುವೊಬ್ಬಳನ್ನು ಮರೆಗೆ ನಿಂತು ಇಣುಕಿ ನೋಡುವ ಬಾಲಗೋಪಾಲನ ಚಿತ್ರ—ಎಲ್ಲರ ಮನವನ್ನೂ ಮರುಳುಗೊಳಿಸಿದುವು. ಪ್ರಭಾ ಆಶೆ-ವಿಷಾದಗಳ ಬೆರಕೆಯ ದನಿಯಲ್ಲಿ ನುಡಿದಳು:

"ಬಲು ಚೆನ್ನಾಗಿದೆ; ನನಗೊಂದನ್ನು ತಂದರೆ ಏನಾಗುತ್ತಿದ್ದಿತೋ!"

"ಗಿರಿಧರ, ಪ್ರಭೆಗೆ ತುಂಬ ಅಪೇಕ್ಷೆಯೇನೋ! ಬೇಕಾದರೆ ಅವಳಿಗೇ ಕೊಟ್ಟು ಬಿಡಬಾರದೇಕೆ?" ಉಷಾ ನುಡಿದಳು.

"ಅದಾಗದು, ನಿನಗೆಂದು ತಂದಿದ್ದೇನೆ; ನೀನೇ ತೆಗೆದುಕೊಳ್ಳ ಬೇಕು." ಗಿರಿಧರನು ವಸ್ತ್ರವನ್ನು ಉಷೆಯ ಕೈಗೆ ಕೊಟ್ಟನು. ಪ್ರಭೆಯನ್ನು ಕುರಿತು ಹೇಳಿದನು:

"ಪ್ರಭಾ! ನಿನಗೊಂದು ಇಂತಹದೇ ಬೇಕಾಗಿದ್ದರೆ, ಇನ್ನೊಂದು ಸಲ ಬರುವಾಗ ತೆಗೆದುಕೊಂಡು ಬರುತ್ತೇನಂತೆ; ಹಾಗೂ ಇದು ಸ್ವದೇಶೀ; ನಿನಗೇತಕ್ಕಿದು!"

ಅಡಿಗೆಯವನು ಕಾಫಿಯನ್ನು ತೆಗೆದುಕೊಂಡು ಬಂದ. ಎಲ್ಲರೂ ಕಾಫಿಯ ಕಪ್ಪುಗಳನ್ನು ಬರಿಯವಾಗಿ ಮಾಡಿದರು; ಆದರೆ ಸುದರ್ಶನನು ಮುಟ್ಟಲಿಲ್ಲ. ಉಷಾ ನುಡಿದಳು:

"ಸುದರ್ಶನ, ನೀನು ಹೊರಗೆ ಬೇಕಾದ ವ್ರತಗಳನ್ನು ಮಾಡ-ಲೊಲ್ಲೆಯೇಕೆ? ಇಲ್ಲಿ ಈಗ ಕಾಫಿಯನ್ನು ತೆಗೆದುಕೊಳ್ಳಲೇಬೇಕು."

ಸುದರ್ಶನನು 'ಒಲ್ಲೆ ಒಲ್ಲೆ' ಎಂದಂತೆ, ಉಷೆಯ ಸ್ನೇಹಭರಿತ ವಾದ ಸಲುಗೆಯ ಒತ್ತಾಯ ಅತಿಶಯವಾಯಿತು. ಕೊನೆಗೆ ಉಷೆಯ ಮನಸ್ಸನ್ನು ಮುರಿಯಲಾರದವನಾಗಿ ಸುದರ್ಶನ ಕಾಫಿಯನ್ನು ಕುಡಿದ. ಮೂದಲಿಕೆಯ ಮಾತಿನಲ್ಲಿ ಗಿರಿಧರನು ನುಡಿದ:

"ಏನಪ್ಪಾ ಸುದರ್ಶನ, ನಾನು ಎಷ್ಟು ಸಲ ನಿನಗೆ ಒತ್ತಾಯ ಪಡಿಸಿಲ್ಲ? ಆಗ ನೀನು ಕಾಫಿಯನ್ನು ಕೈಯಿಂದ ಮುಟ್ಟುವುದಂತಿರಲಿ, ಕಣ್ಣೆತ್ತಿ ನೋಡುತ್ತಿರಲಿಲ್ಲ. ಇಂದೆಯೇನು ಕುಡಿದೇ ಬಿಟ್ಟೆಯಲ್ಲ!"

"ಏನೋ ಅಪ್ಪಾ! ಉಷೆಯ ಮನಸ್ಸನ್ನು ಮುರಿಯುವುದೆಂದರೆ ನನ್ನ ಕಡೆಯಿಂದಾಗುವುದಿಲ್ಲ!"

"ಹೌದು! ಮೋಹಿನಿಯ ಸವಿಮಾತಿಗೆ ಮರುಳಾಗಿಯೆ ದೈತ್ಯರು ಸುರೆಯನ್ನು ಸೇವಿಸಿದರು; ಕಾಮನನ್ನು ಸುಟ್ಟುರುಪಿದ ಶಂಕರನೂ ಹುಚ್ಚನಾಗಿ ಓಡಾಡಿದನು." ಚುಚ್ಚುವ ನಗೆಯೊಂದಿಗೆ ಗಿರಿಧರನು ನುಡಿದ. ತಾನಾಡಿದುದು ಅನುಚಿತವಾದ ಮಾತೇನೋ ಎಂಬ ವಿಚಾರವು ತಿಳಿಯದಂತೆ ಆತನ ಕರುಳನ್ನು ಕಚ್ಚಿದ್ದಿತು.

ಸುದರ್ಶನನು ಸ್ವಾಭಾವಿಕವಾದ ಮೆಲುನಗೆಯೊಡನೆ ಹೇಳಿದ:

"ಏನೇನೋ ಹೊಸರೀತಿಯಲ್ಲಿಯೇ ಮಾತನಾಡುತ್ತಿದ್ದೀಯೆ ನೀನು. ಹೋಗಲಿ ಉಷಾ! ಈಗ ನಿನ್ನ ಮತ್ತು ಪ್ರಭೆಯ ಸಂಗೀತ-ವ್ಯಾಸಂಗದ ಪರೀಕ್ಷೆಯಾಗಬೇಕಾಗಿದೆಯಲ್ಲವೇ?"

"ಅಹುದು, ಮರೆತೇಬಿಟ್ಟಿದ್ದೆನಲ್ಲ! ನೀನು ವಸಂತರಾಗವನ್ನು ಚೆನ್ನಾಗಿ ಹಾಡುತ್ತೀಯೆಂದು ನಿಮ್ಮ ಸಂಗೀತದ ಗುರುಗಳು ಹೇಳುತ್ತಿದ್ದರು. ಆಗಲಿ, ಸ್ವಲ್ಪಹೊತ್ತು ಹಾಯಾಗಿ ಕಾಲಕಳೆಯೋಣ." ಗಿರಿಧರನು ಅನುಭವಿಸುತ್ತಿದ್ದ ಭಾವವನ್ನೆಲ್ಲ ಮರೆತವನಾಗಿ ಹೇಳಿದ.

ಉಷೆಯ ಅಪ್ಪಣೆಯಂತೆ ಆಳು ಹಾರ್ಮೋನಿಯಮನ್ನು ತಂದಿಡುತ್ತಿರುವಾಗ, ಸುದರ್ಶನನು ಸ್ವಾಭಾವಿಕವಾಗಿ ಮಾತನಾಡಿದ:

"ಗಿರಿಧರನಿಗೆ ವಸಂತರಾಗವಾದರೆ ಸಾಕು; ಇನ್ನುಳಿದ ರಾಗಗಳು ಅವನಿಗೆ ಇದ್ದರೂ ಸರಿಯೆ, ಬಿಟ್ಟರೂ ಸರಿಯೆ. ನನಗೇನೋ ಎಲ್ಲ ರಾಗಗಳಿಗಿಂತ ಕೇದಾರಗೌಳದಲ್ಲಿ ತುಂಬ ಆಶೆ!"

ಉಷಾ ಯಾವ ಮಾತನ್ನೂ ಆಡದೆ, ಹಾರ್ಮೋನಿಯಮ್ ತೆರೆದಳು. ಹಾಗೆಯೆ ಕೊಂಚ ಸ್ವರ ಹಿಡಿದು ಬಾಜಿಸಿ, ಒಂದುಸಲ ಕೇದಾರಗೌಳದ ಸ್ವರಸ್ಥಾನಗಳ ಮೇಲೆ ಬೆರಳುಗಳನ್ನು ನಡೆಯಿಸಿದಳು. ಬೆಚ್ಚಿಬಿದ್ದವನಾಗಿ ಗಿರಿಧರನು ಕೇಳಿದ:

"ಇದೇನು? ಕೇದಾರಗೌಳವನ್ನೇ ಮೊದಲುಮಾಡಿಬಿಟ್ಟೆಯಲ್ಲ?"

"ಯಾವುದೇನು! ಮೊದಲು ಇದನ್ನು ಹೇಳಿ, ಬಳಿಕ ನಿನ್ನ ಪ್ರೀತಿಯ ವಸಂತರಾಗವನ್ನು ಹೇಳಿದರಾಗದೆ?" ಉಷಾ ಕೇಳಿದಳು.

ಗಿರಿಧರನ ಎದೆಯಲ್ಲಿ ಮುಂಗಾರ ಮಿಂಚೊಮ್ಮೆ ಮಿಂಚಿಹೋಗಿರಬಹುದು. ಸಿರಿವಂತರಲ್ಲಿ ಸ್ವಾಭಿಮಾನದ ಸೂಕ್ಷ್ಮತೆಯ ಅರಿವು ಹೆಚ್ಚಾಗಿ ಇರುವುದಲ್ಲವೇ! ಬಡವರಿಗೆ ಅದು ಇರುವುದಿಲ್ಲವೆಂತಲ್ಲ; ಆದರೆ ಅವರಿಗೆ ಅಭಿಮಾನಭಂಗವನ್ನು ಸಹಿಸಿ ಸಹಿಸಿ ಅಭ್ಯಾಸವಾಗಿಬಿಟ್ಟಿರುತ್ತದೆ. ತಮ್ಮ ಮಾತಿಗೆ ಗೌಣಸ್ಥಾನ ದೊರೆತುದನ್ನು, ಬಡವರಂತೆ ಸಿರಿವಂತರ ಮನಸ್ಸು ಎಂದಿಗೂ ಸಹಿಸದು. ಗಿರಿಧರನು ಕರುಳುಗಳಿಗೆ ಕೆಂಜಗಗಳನ್ನು ಕಚ್ಚಿಸಿಕೊಳ್ಳುತ್ತ ಒಂದೆರಡು ನಿಮಿಷಗಳನ್ನು ಕಳೆದ. ಮುಂದೆ—ಸಂಗೀತಪ್ರಿಯ

ನಾದುದರಿಂದ— ಸುಮಧುರವಾದ ಶಾಸ್ತ್ರಶುದ್ಧವಾದ ಉಷೆಯ ರಾಗಾಲಾಪನೆಯಲ್ಲಿ ಮೈಮರೆತುಹೋದ. ಸುದರ್ಶನನೂ ಮಗುವಿನ ಸೌಂದರ್ಯವನ್ನು ನೋಡಿ ಆನಂದಿಸುವ ತಾಯಿಯಂತೆ, ಹಿಗ್ಗಿದೆದೆಯಿಂದ ಉಷೆಯ ಗಾನವನ್ನು ಕೇಳುತ್ತಿದ್ದ. ಕಿರುನಗೆಯ ಮೊಗದಿಂದ, ಅರೆದೆರೆದ ಕಂಗಳಿಂದ ಮಧ್ಯೆಮಧ್ಯೆ ತಲೆದೂಗುತ್ತ 'ಭಲೆ' 'ಭಾಪು' ಎಂದು ಉದ್ಗಾರವನ್ನೂ ತೆಗೆಯುತ್ತಿದ್ದ. ರಾಗಾಲಾಪನೆಯಾದ ಮೇಲೆ ಉಷೆಯು "ತನು ನಿನ್ನದು ಜೀವನ ನಿನ್ನದು ಸ್ವಾಮಿ" ಎಂದು ಅದೇ ರಾಗದ ಗೀತವೊಂದನ್ನು ಹಾಡಿ ಮುಗಿಸಿ, ಅಭಿಪ್ರಾಯವನ್ನರಿತುಕೊಳ್ಳಲು ಬಯಸುವ ಕಣ್ಣುಗಳನ್ನು ಸುದರ್ಶನನ ಕಡೆಗೆ ಹೊರಳಿಸಿದಳು.

"ಸೊಗಸು, ಸೊಗಸು! ನೋಡು ಉಷಾ, ನಾನು ಎಷ್ಟೋ ಜನರ ಬಾಯಿಂದ ಈ ರಾಗವನ್ನು ಕೇಳಿದ್ದೇನೆ. ನಿನ್ನಷ್ಟು ಇಂಪಾಗಿ ಯಾರು ಹೇಳಿದುದನ್ನೂ ಕಂಡಿಲ್ಲ. ಇದೇ ರಾಗವೇ ಹೀಗೆ, ಇನ್ನು ವಸಂತರಾಗವನ್ನು ಹೇಳಿದರೆ ಎಷ್ಟು ಚೆನ್ನಾಗಿರುತ್ತದೋ!" ಗಿರಿಧರನು ಅತಿಶಯವಾದ ಮೆಚ್ಚಿಕೆಯನ್ನು ತೋರಿಸುತ್ತ ನುಡಿದ.

"ಸರಿ, ನಿನಗೆ ವಸಂತರಾಗದ್ದೊಂದು ಹುಚ್ಚು! ಗಿರಿಧರಾ, ನೀನಿನ್ನು ಹೀಗೆ ಮಾಡು: ವಸಂತರಾಗದ ರೆಕಾರ್ಡುಗಳನ್ನು ಹಚ್ಚಿದ ಎರಡು ಗ್ರಾಮೊಫೋನುಗಳನ್ನು, ಯಾವಾಗಲೂ—ಎರಡೂ ಕಿವಿಗಳಿಗೆ—ಕಟ್ಟಿಕೊಂಡು ತಿರುಗಾಡು." ನಗೆಮಾತಿನಿಂದ ಗಿರಿಧರನಿಗೆ ನುಡಿದು ಸುದರ್ಶನನು ಪ್ರಭೆಗೆ ಹೇಳಿದ:

"ಪ್ರಭಾ, ಇನ್ನು ನಿನ್ನದಾಗಲಮ್ಮಾ! ಆ ಮೇಲೆ ಗಿರಿಧರನ ವಸಂತಾಗಮನವಾಗಲಿ!"

ಪ್ರಭೆಯು ಸುದರ್ಶನನ ಮಾತುಗಳಿಗೆ ಮರುಮಾತನೇನೂ ಕೊಡದೆ, ಕುತೂಹಲದ ಕಣ್ಣುಗಳಿಂದ ಗಿರಿಧರನನ್ನು ನೋಡಿದಳು.

"ಅಹುದು ಪ್ರಭಾ, ಮೊದಲು ನಿನ್ನದಾಗಲಿ" ಎಂದು ಗಿರಿಧರನ ಬಾಯಿಂದ ಮಾತು ಹೊರಡುವುದಷ್ಟೇ ತಡ; ಪ್ರಭೆಯು ಹಾರ್ಮೋನಿಯಮಿನ ಮುಂದೆ ಕುಳಿತಳು.

" ನನಗೆ ರಾಗಾಲಾಪನೆ ಸರಿಯಾಗಿ ಬಾರದು. ಹಾಗೆಯೇ ಒಂದು ಹಾಡನ್ನು ಹೇಳುತ್ತೇನೆ. "

" ಆಗಲಿ !" " ಹಾಗೆಯೇ ಆಗಲಿ !" ಗಿರಿಧರ ಸುದರ್ಶನರೆಂದರು.

ಪ್ರಭೆಯು ಹಾರ್ಮೋನಿಯಮ್ ಬಾಜಿಸುತ್ತ "ಕೃಷ್ಣ ಮುರಾರಿ ಬಿನತಿ ಕರತ ಕರ ಹರಿ " ಎಂಬ ಪದವನ್ನು ನಿಧಾನವಾಗಿ ಹಾಡಲು ತೊಡಗಿದಳು. ಹಾಡುತಿರುವಾಗ ಮಧ್ಯೆ ಮಧ್ಯೆ ಗಿರಿಧರನ ಮುಖದ ಕಡೆಗೆ ನೋಡುತ್ತಿದ್ದಳು. ಉಷೆಯು ಹಾಡುತಿರುವಾಗಿನ ಸಂಗೀತಶ್ರವಣಾನುಭವದ ಸಂತೋಷದ ಗುರುತುಗಳು ಆಗ ಆತನ ಮುಖದ ಮೇಲೆ ಕಾಣಿಸದಿರುವುದನ್ನು ನೋಡಿದಂತೆಲ್ಲ, ಪ್ರಭೆಯ ಧ್ವನಿಯು ನಡುಕವನ್ನು ಪಡೆಯಿತು. ಬಾಜಿಸುವ ಬೆರಳುಗಳಿಗೆ ಅಡೆತಡೆಯೊದವಿತು. ಪ್ರಾರಂಭದ ಉತ್ಸಾಹವು ಕೊನೆಯವರೆಗೆ ಉಳಿಯದೆ ಹೋಯಿತು. ಅಂತೂ ಹಾಡನ್ನೊಮ್ಮೆ ಹಾಡಿ ಮುಗಿಸಿದಳು.

" ಪರವಾ ಇಲ್ಲ ! ಚೆನ್ನಾಗಿ ಹೇಳುತ್ತೀಯಮ್ಮಾ ನೀನೂ ! ಏನು ಗಿರಿಧರ, ಪ್ರಭೆಯ ಕಂಠ ಚೆನ್ನಾಗಿಲ್ಲವೇ ?" ಸುದರ್ಶನನು ನುಡಿದ.

" ಕಂಠ ಚೆನ್ನಾಗಿದೆಯಾದರೂ ಸಂಗೀತದ ಅಭ್ಯಾಸವು ಸಾಕಷ್ಟು ಇದ್ದಂತಿಲ್ಲ ! ಇನ್ನೂ ಚೆನ್ನಾಗಿ ವ್ಯಾಸಂಗಮಾಡಬೇಕು. ಉಷಾ, ಇನ್ನಾದರೂ ವಸಂತರಾಗವನ್ನು ಹೇಳುತ್ತೀಯೇನು ? "

ಉಷೆಯು ಹಾರ್ಮೋನಿಯಮ್ ತನ್ನ ಕಡೆಗೆ ಸರಿಸಿಕೊಂಡು, ವಸಂತರಾಗವನ್ನು ನುಡಿಸುವುದಕ್ಕೆ ಮೊದಲು ಮಾಡಿದಳು. ಒಂದುಸಲ ಹಾರ್ಮೋನಿಯಮಿನಲ್ಲಿ ಸ್ವರಮಾಲೆಯನ್ನು ಹುಟ್ಟಿಸಿ ತೋರಿಸುವಳು. ಕೂಡಲೆ ಅದೇ ಸ್ವರಮಾಲೆಯನ್ನು ಕಂಠದಲ್ಲಿ ಹೊರಡಿಸುವಳು. ಉಷಾ ವೀಣೆಯನ್ನು ತೆಗೆದುಕೊಂಡು ಕುಳಿತಿದ್ದರೆ, ಆಕೆಯನ್ನು ಸಂಗೀತಾಭಿಮಾನಿ ದೇವತೆಯಾದ ಸರಸ್ವತಿಗೆ ಹೋಲಿಸಬಹುದಾಗಿದ್ದಿತು. ಆದರೆ ಎದುರಿನಲ್ಲಿ ವಿದೇಶೀಯವಾದ ಹಾರ್ಮೋನಿಯಮ್; ಅವಳನ್ನು ಯಾರಿಗೆ ಹೋಲಿಸಿ ಬಣ್ಣಿಸಬೇಕು ! ಅನುಭವಿಸಿದ ರಸವನ್ನು ತಕ್ಕ ಭಾಷೆಯಿಂದ ಚಿತ್ರಿಸಿ ತೋರಿಸಲಿಕ್ಕೆ ಬಾರದ—ಶಬ್ದದಾರಿದ್ರ್ಯದ ಕವಿಯು 'ಏಂ ಚೆಲ್ವೊ ' ' ಏಂ ಪೊಸತೊ ' ; ಅದೇಂ ಸೊಗಸೊ ' ಎಂದು ಹೇಳು-

ತಿರುವಂತೆ—ನಾವೂ ಉಷೆಯನ್ನೂ ಅವಳ ಸಂಗೀತವನ್ನೂ 'ಅವರ್ಣ-ನೀಯ' 'ಅನುಪಮೇಯ' 'ಅಪ್ರಮೇಯ' ಎಂಬ ಮಾತುಗಳಿಂದ ಹೇಳಿ, ನಮ್ಮ ಕರ್ತವ್ಯಭಾರದಿಂದ ಮುಕ್ತರಾಗಬಹುದು.

ರಾಗವನ್ನು ಮುಗಿಸಿ ಉಷೆಯು "**ಚಿರಸುಖದರಮಣಿಯು ನಮ್ಮ ಭರತಭೂಮಿಯು**" ಎಂಬ ಗೀತವನ್ನು ಅಭಿಮಾನಯುಕ್ತವಾದ ಆವೇಶದಲ್ಲಿ ಹಾಡಿದಳು. ಗಿರಿಧರನ ಆನಂದಕ್ಕೆ ಅಳತೆಯಿಲ್ಲ. ಕೈಯಿಂದ ತಾಳಹಿಡಿದನು, ತೊಡೆಯನ್ನು ಹಾರಿಸಿದನು, ಅಡಿಯನ್ನು ಕುಣಿಸಿದನು, ತಲೆಯನ್ನು ತೂಗಿದನು. ಮೆಚ್ಚಿಕೆಯ ಉದ್ಗಾರಗಳಿಗಂತೂ ಅಳತೆಯಿರದು. ಸುದರ್ಶನನ ಸಂಗೀತ ಶ್ರವಣಾನಂದದ ಸೌಮ್ಯವಾದ ಆವಿರ್ಭಾವಗಳೂ ನೋಡುವಂತಹವಿದ್ದುವು. ಹಾಡು ನಿಲ್ಲಿಸಿದೊಡನೆಯೆ ಗಿರಿಧರನು ನುಡಿದ:

"ಉಷಾ, ನಿಜವಾಗಿಯೂ ನೀನು ಸಂಗೀತದಲ್ಲಿ ಇಷ್ಟೊಂದು ನೈಪುಣ್ಯವನ್ನು ಪಡೆದಿದ್ದೀಯೆಂದು ನಾನೆಂದುಕೊಂಡಿರಲಿಲ್ಲ. ಪ್ರಭೆ ಕೂಡ ನಿನ್ನೊಡನೆಯೆ ಸಂಗೀತಪಾಠವನ್ನು ಕಲಿಯುತ್ತಿದ್ದಾಳಲ್ಲವೇ?"

"ಅಹುದು, ಕಲಿಯುತ್ತಿದ್ದಾಳೇನೋ ಸರಿ; ಆದರೆ ಅವಳಿಗದು ತಲೆಬೇಸರು!"

ಗಿರಿಧರನ ಮುಖ ಮುದುಡಿದುದನ್ನು ಪ್ರಭೆಯು ನೋಡಿದಳು. ಆಕೆ ತನ್ನ ಪ್ರೀತಿಯ ಜರಿಯ ಪತ್ತಲು ಹರಿದುಹೋದಾಗಿಗಿಂತ ಹೆಚ್ಚಾಗಿಯೆ ಈಗ ಮನದಲ್ಲಿ ಮಿಡುಕಿದಳು. ಏನೇನನೋ—ಒಳಗೊಳಗೆಯೆ—ಎಣಿಕೆ ಹಾಕುತಿರುವವರಂತೆಯೂ ತೋರಿದಳು.

ಗಿರಿಧರನ ಮೆಚ್ಚಿಕೆಯಿಂದ ಹುಮ್ಮಸುಗೊಂಡ ಉಷೆಯು, ಹೆಮ್ಮೆಯ ಕಿರುನಗೆಯಿಂದ ಸುದರ್ಶನನನ್ನು ನೋಡಿದಳು. ಆತನ ಕಣ್ಣುಗಳಿಂದಲೂ ಮೆಚ್ಚಿಕೆಯ ನೋಟ ತನ್ನ ಕಡೆಗೆ ಹರಿದು ಬರುತ್ತಿರುವುದನ್ನು ಕಂಡು, ನಸುನಾಚಿದವಳಂತೆ ತಲೆಯನ್ನು ಬಾಗಿಸಿದಳು. ಸುದರ್ಶನನು ಗಡಿಯಾರದ ಕಡೆಗೆ ನೋಡಿ ಮಾತನಾಡಿದ:

"ಅಬ್ಬಾ, ಐದೂಮುಕ್ಕಾಲುಗಂಟೆ! ಗಿರಿಧರ, ಹಾಗೆಯೇ ಕೊಂಚ ಸುತ್ತಾಡಿಕೊಂಡು ಬರೋಣವೇ?"

"ಅಹುದು, ಹೋಗಿಬರೋಣ; ಉಂಡ ಅನ್ನವಾದರೂ ಅರಗ ಬೇಕೋ ಇಲ್ಲವೋ!" ಗಿರಿಧರ – ಸುದರ್ಶನರಿಬ್ಬರೂ ಉಪ್ಪರಿಗೆಯನ್ನಿಳಿದು ಹೊರಟುನಡೆದರು; ಪ್ರಭಾ ಉಷಾ ಇಬ್ಬರೂ ಅವರ ನಿರ್ಗಮನವನ್ನು ಎವೆಯಿಕ್ಕದೆ ನೋಡುತ್ತಿದ್ದರು.

---

## ೫ನೆಯ ಪರಿಚ್ಛೇದ

ಬೆಳಗಿನ ಏಳುಗಂಟೆ; ಬಡವರಾದವರ ಕರ್ಮಯೋಗಕ್ಕೆ ಮೊದಲಾಗಿ ಒಂದುವರೆ ಎರಡು ಗಂಟೆಗಳಾಗಿವೆಯಾದರೂ, ಮಲಗಿದ್ದ ಸಿರಿವಂತರು ಮುಚ್ಚಿದ್ದ ಕಣ್ಣನ್ನು ಹೊಸಗುವ ಕಾಲವದು. ಎಳಬಿಸಿಲು ಗ್ರೀಷ್ಮದ ತಳಿರಂತೆ ಬಲಿಯುವುದರಲ್ಲಿದೆ. ಸಂಗೀತಶಾಸ್ತ್ರಿಗಳು, ದೊಡ್ಡದೊಂದು ತಂಬೂರಿಯನ್ನು ಹಿಡಿದುಕೊಂಡು ಮೊಗಸಾಲೆಯಲ್ಲಿ ಕುಳಿತಿದ್ದಾರೆ. ಸಂಗೀತದ ಗಂಧವಿಲ್ಲದವರಿಗೂ ಹಾಡುವ ಹುರುಪನ್ನು ಹುಟ್ಟಿಸುವಂತೆ, ತಂಬೂರಿ ಅವಿರತನಿನಾದದ ತೆರೆಗಳನ್ನು ವಾತಾವರಣದಲ್ಲಿ ತುಂಬುತ್ತಲಿದೆ. ತನಿವಾಲಲ್ಲಿ ಸಕ್ಕರೆಯನ್ನು ಬೆರಸಿದಂತೆ— ತಂಬೂರಿಯ ನಿನಾದದಲ್ಲಿ ಬೆರತುಕೊಂಡು ನಡೆದಿದ್ದ ಶಾಸ್ತ್ರಿಗಳ ಪ್ರಭಾತ-ಸಂಗೀತವು ಜನರ ಕಿವಿಗಳನ್ನು ನಿಮಿರಿಸುತ್ತಲಿದೆ.

"**ನಾ ನಿನ್ನ ಧ್ಯಾನದೊಳಿರಲು | ಮಿಕ್ಕ ಮಾನವರೇನು ಮಾಡುವರು ಗೋಪಾಲಾ**" ಎಂಬ ದಾಸರ ಕೀರ್ತನೆಯನ್ನು ಆ ಕಾಲಕ್ಕೆ—ಆ ಕೀರ್ತನೆಯಲ್ಲಿಯ ಭಾವಕ್ಕೆ—ಉಚಿತವಾದ ನಾದನಾಮಕ್ರಿಯಾರಾಗದಲ್ಲಿ ಶಾಸ್ತ್ರಿಗಳು ಹೇಳುತ್ತಿರುವಾಗ, ನಡುನಡುವೆ ಅವರ ಕಂಠವು ಬಿಗಿದುಬರುವುದು. ಕಣ್ಣಿಂದ ಹನಿಹನಿಯಾಗಿ ನೀರು ಸುರಿಯುವುದು. ಭಕ್ತಿರಸದ ಅನು-ಭಾವ, ಸಾತ್ತ್ವಿಕಭಾವಗಳನ್ನು ಅವರ ಅಂಗಾಂಗಗಳಲ್ಲಿಯೂ ಕಾಣಬಹುದಾಗಿದ್ದಿತು. ಆ ಕೀರ್ತನೆಯಲ್ಲಿ ಸಂಬೋಧಿತನಾದ ಆ ಗೋಪಾಲನ ವನಮಾಲಾ-ಮಯೂರಪಿಂಛಗಳಿಂದ ಪರಿರಂಜಿತವಾದ ಮುರಲೀಧರ ಮೂರ್ತಿಯನ್ನು ಕಣ್ಣೆದುರಿಗೆ ಕಾಣುತ್ತಿರುವಂತೆ ಶಾಸ್ತ್ರಿಗಳ ಮುಖವು ವಿಕಸಿತವಾಗಿರುವುದು. ತಲ್ಲೀನರಾಗಿ ಅವರು ಹಾಡುತ್ತಿದ್ದರು:

**‘ ಧಾಳಿಲಿ ಕುದುರೆ ವೈಹಾಳಿಲಿ ನಡೆಯಲು |**
**ಧೂಳು ರವಿಗೆ ತಾನೇ ಮುಸುಕುವುದೇ ? ||**
**ತಾಳಿದವರಿಗೆ ವಿರುದ್ಧಲೋಕದೊಳುಂಟೆ ? |**
**ಗಾಳಿಗೆ ಗಿರಿ ನಡುಗುವುದೇ ಗೋಪಾಲಾ ! ||**

ಶಾಸ್ತ್ರಿಗಳ ಹೆಂಡತಿ ಸರಸಮ್ಮ ಅಲ್ಲಿಗೆ ಬಂದರು. ಉಟ್ಟದ್ದೊಂದು ಹಳೆಯ ಮಾಸಲುಬಣ್ಣದ ಸೀರೆ. ಕೆದರಿ ಚೆಲ್ಲಾಪಿಲ್ಲಿಯಾದ ತಲೆಗೂದಲು ನೆತ್ತಿಯಮೇಲೆ ನಿಮಿರಿನಿಂತಿವೆ. ಕೈಯಲ್ಲಿ ಪೊರಕೆ. ಬರಬೇಕಾದರೆ ಸುಟ್ಟುರೆಗಾಳಿ ಬಂದಂತೆ ಬಂದರು. ರಸಿಕರಾದ ಶಾಸ್ತ್ರಿಗಳು ಮದುವೆಯ ಕಾಲದಲ್ಲಿ—ತಂದೆತಾಯಿಗಳು ಬೇಡಬೇಡವೆಂದು ಅದೆಷ್ಟು ಹೇಳಿದರೂ ಕೇಳದೆ—ಪ್ರೀತಿಯಿಂದ ತಮ್ಮಾಕೆಗೆ ‘ ಸರಸ್ವತೀ ’ ಎಂದು ಹೆಸರನ್ನು ಇಟ್ಟಿದ್ದರು. ಶಾಸ್ತ್ರಿಗಳ ‘ ಸರಸ್ವತಿ’ಯು, ಜನರ ಬಾಯಲ್ಲಿ ‘ ಸರಸಮ್ಮ’ ನಾಗಿದ್ದಳು. ತಮಗಿಂತ ಜನರಲ್ಲಿ ಸ್ವಭಾವವಿಮರ್ಶಕಬುದ್ಧಿಯು ಹೆಚ್ಚಾಗಿರುವುದೆಂದೂ ‘ ಸರಸ್ವತಿ ’ ಎಂಬುದಕ್ಕಿಂತ ‘ ಸರಸಮ್ಮ ’ ಎಂಬುದೇ ತಕ್ಕ ಹೆಸರೆಂದೂ ಈಗ ಶಾಸ್ತ್ರಿಗಳ ಅನುಭವಕ್ಕೆ ಪೂರ್ಣವಾಗಿ ಬಂದುಬಿಟ್ಟಿದ್ದಿತು. ಅಲ್ಲಿ ಬಂದ ಸರಸಮ್ಮ ಒಮ್ಮೆಲೆ ಕೂಗಿಕೊಂಡರು:

“ ಈ ಹಾಳು ತಂಬೂರಿ ಎಂದಿಗೆ ಒಡೆದುಹೋಗುತ್ತದೋ ! ಬೆಳಗಾಗುವುದಕ್ಕೆ ಮೊದಲೇ ಕಿರಿಚಿಕೊಳ್ಳಲಿಕ್ಕೆ ಪ್ರಾರಂಭ ! ನನ್ನ ಹಣೆಯ ಬರಹ, ಮತ್ತೇನು ಮಾಡುವುದದೆ ! ಎಲ್ಲರೂ ಗಂಡಂದಿರನ್ನು ಪಡೆದಂತೆ ನಾನೂ ಪಡೆದಿದ್ದೇನೆ . . ”

ಸಂಗೀತದಲ್ಲಿ ಸಮರಸರಾಗಿ ಹೋದ ಶಾಸ್ತ್ರಿಗಳ ಮನವನ್ನು, ಸರಸಮ್ಮನ ಈ ಕೂಗು ಮುಟ್ಟಲಿಲ್ಲ ; ಹಾಗೆಯೆ ಹಾಡುತ್ತಲೆ ಇದ್ದರು:

**‘ ನಾ ನಿನ್ನ ಧ್ಯಾನದೊಳಿರಲು | ಮಿಕ್ಕ**
**ಮಾನವರೇನು ಮಾಡುವರೋ ಗೋಪಾಲಾ ! ’**

“ ಮಿಕ್ಕವರು ಏನು ಏತಕ್ಕೆ ಮಾಡಬೇಕಾಗಿದೆ ? ನಿಮ್ಮ ಕೈಹಿಡಿದಾಕೆಯಾದುದರಿಂದ ನಾನು ಮಾತ್ರ ಏನೆಲ್ಲವನ್ನೂ ಮಾಡಬೇಕಾಗಿದೆ ! ” ಎಂದು ನುಡಿದು ಸರಸಮ್ಮ ಮುಂಮುವರಿದುಹೋಗಿ, ತಂಬೂರಿಯ ತಂತಿ-

ಗಳನ್ನು ಬಿಗಿಯಾಗಿ ಹಿಡಿದಳು. ಶಾಸ್ತ್ರಿಗಳು ಗಂಧರ್ವಲೋಕದಿಂದ ಮರ್ತ್ಯಲೋಕಕ್ಕಿಳಿದರು. ಒಳಗಣ್ಣೆದುರಿನ ಮುರಲೀಧರ ಮೂರ್ತಿಯ ಪ್ರಸನ್ನಮುಖವು ಮರೆಯಾಗಿ, ಸಂಮಾರ್ಜನೀಧಾರಿಣಿಯಾದ ಸರಸಮ್ಮನ ರೌದ್ರಮುಖದಿಂದ ಪ್ರತ್ಯಕ್ಷಳಾದುದನ್ನು ಹೊರಗಣ್ಣೆದುರು ಕಂಡರು. ಸರಸಮ್ಮನ ಬಿಗಿಯಾದ ಹಿಡಿತದ ಮೂಲಕ ತಂಬೂರಿಯ ನಡುವಿನ ತಂತಿಯೊಂದು ಚಟ್ಟೆಂದಿತು. ಶಾಸ್ತ್ರಿಗಳು ಕೋಪದ ಕೆಮ್ಮೊಗದವರಾಗಿ, ಸ್ವಲ್ಪ ರೇಗಿದ ದನಿಯಲ್ಲಿಯೆ ಮಾತನಾಡಿದರು :

" ಇದೇನೇ ಇದು ಹುಡುಗಾಟ? ತಂತಿ ಕಿತ್ತಿಬಿಟ್ಟಿತಲ್ಲವೇ ! "

" ತಂತಿಯಷ್ಟೇ ಕಿತ್ತಿತು ; ಇನ್ನೂ ತಂಬೂರಿಯೇನೂ ಒಡೆದು ಹೋಗಲಿಲ್ಲವಲ್ಲ ! ಒಡೆದಿದ್ದರೆ ತಣ್ಣಗೆ ಆಗಿಹೋಗುತ್ತಿದ್ದಿತು. ಯಾವಾಗ ನೋಡಲಿ, ಕೈಯೊಳಗೆ ತಂಬೂರಿ ತಪ್ಪಿದರೆ ಪುಸ್ತಕ, ಪುಸ್ತಕ ತಪ್ಪಿದರೆ ತಂಬೂರಿ, ಇದ್ದದ್ದೇ ! ಮೊದಲಿನ ಜನ್ಮದಲ್ಲಿ ನನಗೆ ಸವತಿಯರಾಗಿದ್ದುವೇನೋ ಅವೆರಡೂ ! ಎಂಟು ಹೊಡೆಯಲಿಕ್ಕೆ ಬಂತು ! ಪಡಸಾಲೆಯ ಕಸಗೂಡಿಸುವುದು ಬೇಡವೆ ಬೇಡವೇನು ? "

ಶಾಸ್ತ್ರಿಗಳು ತಮಗೆ ತಾವೇ ಗಟ್ಟಿಯಾಗಿ ಎಂದುಕೊಂಡರು :

" ದೇವಾ, ತಾಳಿದವರಿಗೆ ವಿರುದ್ಧ ಲೋಕದೊಳುಂಟೆ ?–ಎಂದು ದಾಸರ ಬಾಯಿಂದ ಹೇಳಿಸಿರುತ್ತೀಯೆ. ತಾಳುವುದೆಂದರೆ ಎಲ್ಲಿಯವರೆಗೆ ತಾಳಬೇಕದು ? "

" ನಾನೂ ಅದನ್ನೇ ಕೇಳುತ್ತೇನೆ ; ತಾಳುವುದೆಂದರೆ ಎಲ್ಲಿಯವರೆಗೆ ತಾಳಬೇಕು ? ಅದಕ್ಕೊಂದು ಅಳತೆ—ಮೇರೆ ಬೇಕೋ ಬೇಡವೋ ! ನನ್ನನ್ನು ಮದುವೆಯನ್ನಾದರೂ ಏತಕ್ಕೆ ಮಾಡಿಕೊಳ್ಳಬೇಕಾಗಿತ್ತು ? ಇದ್ದುವಲ್ಲ ನಿಮ್ಮ ಸುಟ್ಟುಮುಖದ ತಂಬೂರಿ, ಸುಡುಗಾಡು ಮುಖದ ಪುಸ್ತಕಗಳು ! ಮಾಡಿಕೊಂಡ ಹೆಂಡತಿಯ ಕೂಡ ಸರಿಯಾಗಿ ಒಂದು ಮಾತನಾಡುವ ಹಾಗಿಲ್ಲ ; ಹಗಲಿರುಳೂ ಕಿರಿಚಿಕೊಳ್ಳುವುದು ಕೋಣನಂತೆ, ಇಲ್ಲದಿದ್ದರೆ ಮೂಕದೆವ್ವನಂತೆ ಮೂಗಿನ ಮುಂದೆ ಪುಸ್ತಕ ಹಿಡಿದುಕೊಂಡು ಕುಳಿತಿರುವುದು ! "

ವಿಷಾದವು ತುಂಬಿ ಸೂಸುತ್ತಿರುವ ನಗುವೊಂದನ್ನು ನಕ್ಕು ಶಾಸ್ತ್ರಿಗಳು ಕೇಳಿದರು :

"ನಿನ್ನೊಡನೆ ಸರಿಯಾಗಿ ಮಾತನಾಡುವುದೆಂದರೆ ಹೇಗೆ ?"

"ಹೇಗೆ ಅಂತೆ ಹೇಗೆ ! ಏನೂ ತಿಳಿಯದ ಹಸುಮಗು, ಪಾಪ ! ಪಾಠಶಾಲೆಗೆ ಹೋಗಿ ಕಲಿತುಕೊಂಡು ಬನ್ನಿ ಹೋಗ್ರಿ ! ಏನಾದರೂ ಹಾಳಾಗಲಿ, ನನಗೆ ಹೊತ್ತಾಯಿತು ಏಳ್ರಿ ! ಬೇಗನೆ ಏಳ್ರಿ !"

"ಏನೇ, ಇಲ್ಲಿ ನೋಡು. ದಾಸರಿಗೆ ನಿನ್ನಂತಹ ಹೆಂಡತಿ ಸಿಕ್ಕಿದ್ದರೆ 'ಮಿಕ್ಕ ಮಾನವರೇನು ಮಾಡುವರೋ' ಎಂಬ ಮಾತನ್ನು ಹಾಕದೆ 'ಇಂಥಾ ದಾನವಿಗೇನ ಮಾಡಲಿಯೋ ಗೋಪಾಲಾ' ಎಂದು ಖಂಡಿತವಾಗಿಯೂ ಹಾಕುತ್ತಿದ್ದರು ನೋಡು !" ಎಂದು ನಗುನಗುತ್ತಲೆ ನುಡಿಯುತ್ತ, ಶಾಸ್ತ್ರಿಗಳು ತಂಬೂರಿಗೆ ಮುಸಕನ್ನು ಹಾಕಲು ತೊಡಗಿದರು. ಸಿಡಿನುಡಿಗಳಿಂದ ಸರಸಮ್ಮ ಹೇಳಿದರು :

"ಯಾವಾಗ ಮಾತನಾಡಿದರೂ ಇಂತಹ ಸುಟ್ಟಮಾತುಗಳೇ. ದಾಸರು ಹಾಕಲಿಲ್ಲ ; ನೀವೀಗ ಆ ಮಾತನ್ನು ಹಾಕಿ ಕಿರಿಚಿಕೊಳ್ಳುತ್ತ ಕುಳಿತಿರ್‍ರಿ. . ಹಗಲು ಹನ್ನೆರಡು ತಾಸೂ !"

ಶಾಸ್ತ್ರಿಗಳು ಎದ್ದು ಪ್ರಾತರ್ವಿಧಿಗಾಗಿ ನಡೆದರು. ಸರಸಮ್ಮ ಮೊಗಸಾಲೆಯ ಕಸವನ್ನು ಗುಡಿಸತೊಡಗಿದರು. ಆಗ ಕ್ರೋಧ–ಪಶ್ಚಾತ್ತಾಪಗಳೆರಡೂ ಬೆರೆತ ಧ್ವನಿಯಲ್ಲಿ, ತಮ್ಮಲ್ಲಿ ತಾವೇ ನುಡಿದುಕೊಳ್ಳುತ್ತಿದ್ದರು :

"ಹಾಳು ! ಆ ಸುಡುಗಾಡುಮುಖದ ತಂಬೂರಿಯನ್ನು ನಾನೇತಕ್ಕೆ ಹಿಡಿದೆನೋ ! ಹನ್ನೆರಡುತಾಸು ತಿಕ್ಕುತ್ತಿದ್ದರೂ ಏನೂ ಆಗದ ಆ ಕೆಟ್ಟ ತಂತಿ, ನಾನು ಕೈ ಹಚ್ಚಿದ ಕೂಡಲೆ ಚಟ್ಟೆನ್ನಬೇಕೇ ? ಅದೂ ಜನರನ್ನು ನೋಡಿ ಮಾಡುವುದೇನೋ ! ನನ್ನ ಪ್ರಾರಬ್ಧ, ಯಾರೇನು ಮಾಡುತ್ತಾರೆ !"

ಸರಸಮ್ಮ ಕಸಗೂಡಿಸಿ, ಮೂಲೆಯಲ್ಲಿ ಒಟ್ಟುಗೂಡಿಸುತ್ತಿದ್ದರು. ಇದ್ದುದಿದ್ದ ಹಾಗೆಯೆ ಪ್ರಭಾ ಒಳಕ್ಕೆ ಬಂದಳು. ಆಶ್ಚರ್ಯದ ನೋಟದಿಂದ ನೋಡುತ್ತ ಸರಸಮ್ಮ ಮಾತನಾಡಿದರು :

"ಇದೇನವ್ಮಾ ಪ್ರಭಾ, ಬೆಳಗಿನಲ್ಲಿಯೇ ಬಂದುಬಿಟ್ಟೆ? ಏನು ಕೆಲಸವಿದೆಯೇ? ಬಾ ಕುಳಿತುಕೋ!"

"ಶಾಸ್ತ್ರಿಗಳು ಎಲ್ಲಿದ್ದಾರೆ? ಅವರನ್ನು ಕಾಣಬೇಕಾಗಿದೆ." ಎಂದು ಮಾತನಾಡುತ್ತಿರುವಾಗಲೆ ಅಲ್ಲಿಯೆ ಇಟ್ಟಿದ್ದ ಕುರ್ಚಿಯೊಂದರ ಮೇಲೆ ಪ್ರಭಾ ಕುಳಿತುಕೊಂಡಳು.

"ಹೊರಕ್ಕೆ ಹೋಗಿದ್ದಾರೆ, ಈಗ ಬರಬಹುದು. ಏನು ಅಂತಹ ಕೆಲಸ?"

"ಶಾಸ್ತ್ರಿಗಳ ಕಡೆಗೆ ಮತ್ತೇನು ಕೆಲಸ! ನಾನು ಚೆನ್ನಾಗಿ ಸಂಗೀತ ಕಲಿಯಬೇಕಾಗಿದೆ. ಪಾಠ ಹೇಳುವುದಕ್ಕೆ ಪ್ರತಿದಿನ ಬೆಳಗಿನಲ್ಲಿ ನಮ್ಮ ಮನೆಗೇ ಬರಬೇಕೆಂದು ಹೇಳಿಹೋಗಲಿಕ್ಕೆ ಬಂದಿದ್ದೇನೆ."

"ಎಲ್ಲಿ ನೋಡಿದಲ್ಲೆಲ್ಲಾ ಸಂಗೀತದ ಹುಚ್ಚು. ಆ ತಲೆನೋವಿನ ಕಿರಿಚಾಟದಲ್ಲಿ ಏನು ಹುರುಳಿದೆಯೋ ದೇವರಿಗೆ ಗೊತ್ತು!"

"ನಿಮ್ಮ ಮಾತು ನಿಜ ನೋಡಿ ಸರಸವ್ಮಾ! ನಿಮ್ಮಂತೆಯೆ ನನಗೂ ಎನಿಸುತ್ತಿದೆ; ಆದರೆ ನಿರ್ವಾಹವಿಲ್ಲ, ಕಲಿತುಕೊಳ್ಳಲಿಕ್ಕೇ ಬೇಕಾಗಿದೆ!"

"ನಿರ್ವಾಹವೇಕಿಲ್ಲವವ್ಮಾ! ನಿನಗೇನು ಕಡಿಮೆಯಾಗಿದೆ?"

"ಕಡಿಮೆಯಾಗಿದೆಯೆಂದಲ್ಲ; ನಾನು ಚೆನ್ನಾಗಿ ಸಂಗೀತ ಕಲಿತು-ಕೊಳ್ಳಬೇಕೆಂದು ಗಿರಿಧರನ ಮನಸ್ಸಿನಲ್ಲಿ ಇದ್ದಂತೆ ಕಾಣುತ್ತದೆ."

"**ನೀನು** ಸಂಗೀತ ಕಲಿಯಬೇಕೆಂದು **ಗಿರಿಧರನ** ಮನಸ್ಸೇತಕ್ಕಿರಬೇಕು ಪ್ರಭಾ?"

ನಾಚಿಕೆಯುಡರಿದ ಕೆವ್ಮೊಗವನ್ನು ಪ್ರಭಾ ಕೆಳಕ್ಕೆ ತಗ್ಗಿಸಿದಳು. ಸುಮ್ಮಸುಮ್ಮನೆ ಸೀರೆಯಂಚನ್ನು ಕೈಯಿಂದ ತಿಕ್ಕಲು ತೊಡಗಿದಳು. ಕುರ್ಚಿಯಿಂದ ಕೆಳಕ್ಕೆ ಇಳಿಬಿಟ್ಟ ಕಾಲುಗಳನ್ನು ಕುಣಿದಾಡಿಸಲಾರಂಭಿಸಿದಳು.

"ಇದೇನವ್ಮಾ, ಗಿರಿಧರನ ಹೆಂಡತಿಯಾಗುವಾಕೆ ಇರುತ್ತೀಯೇನು ನೀನು?"

ಪ್ರಭೆಯ ಮುಖ ಇನ್ನಿಷ್ಟು ಕೆಂಬಣ್ಣಕ್ಕಿಳಿಯಿತು. ನಾಚಿಕೆ ಅವಳ ಅಂಗಾಂಗಗಳಲ್ಲಿಯೂ ಪ್ರವಹಿಸಿತು.

" ತಿಳಿಯಿತು ಬಿಡು ! ನಿನ್ನಂತಹ ಚೆಲುವೆ ಹೆಂಡತಿಯಾಗಿ ಸಿಕ್ಕರೆ ಸಾಲದೇನು ಗಿರಿಧರನಿಗೆ? ಸಂಗೀತವನ್ನು ತೆಗೆದುಕೊಂಡೇನು ಉಪ್ಪಿನ ಕಾಯಿ ಹಾಕುವವನಿದ್ದಾನೆ?"

" ಸಂಗೀತ ಆತನಿಗೆ ತುಂಬ ಇಷ್ಟ; ನಿನ್ನೆ ಉಷೆಯು ಚೆನ್ನಾಗಿ ಹಾಡಿದಳೆಂದು ಆಕೆಯನ್ನು ಎಷ್ಟೋ ಹೊಗಳಿಬಿಟ್ಟ. ಪ್ರೀತಿಯ ನೋಟ ದಿಂದ ಅವಳ ಕಡೆಗೆ ನೋಡಿದ!"

" ದೇವರು ಗಂಡುಸರಲ್ಲಿ ಇಲ್ಲದ ಹುಚ್ಚು ಹುಚ್ಚು ರುಚಿಗಳನ್ನು ಇಟ್ಟಿದ್ದಾನೆ ನೋಡಮ್ಮಾ ಪ್ರಭಾ !"

ಸರಸಮ್ಮನ ಮಾತು ಮುಗಿಯುತ್ತಿರುವಾಗಲೆ ಶಾಸ್ತ್ರಿಗಳು ಅಲ್ಲಿಗೆ ಬಂದರು ; ಆಶ್ಚರ್ಯದಿಂದ ಕೇಳಿದರು :

" ಏನು ! ಪ್ರಭಾ ಬಂದಿದ್ದಾಳೆ! ಈಗೇನಮ್ಮಾ ಬಂದದ್ದು ?"

ಪ್ರಭಾ ಉತ್ತರ ಕೊಡಬೇಕೆಂದಿರುವಷ್ಟರಲ್ಲಿಯೆ ಸರಸಮ್ಮ ಹೇಳಿದರು :

" ಪ್ರಭಾ ಗಿರಿಧರನ ಹೆಂಡತಿಯಾಗುವವಳಿದ್ದಾಳಂತೆ. ಆತನಿಗೂ ನಿಮ್ಮ ಹಾಗೆ ಹಾಳು ಸಂಗೀತದಲ್ಲಿ ಇಷ್ಟವಂತಲ್ಲಾ, ಅದಕ್ಕಾಗಿ ನೀವು ಇವಳಿಗೆ ಸಂಗೀತಪಾಠವನ್ನು ಹೇಳಿಕೊಡಬೇಕಂತೆ."

" ಅಹುದೇನಮ್ಮಾ ಪ್ರಭಾ ?"

ಪ್ರಭಾ ನಾಚಿದವಳಾಗಿಯೇ ಮಾತನಾಡಿದಳು :

" ತಂದೆಯವರು ಹೇಳಿದ್ದಾರೆ ; ನೀವು ಪ್ರತಿದಿನ ಬೆಳಗಿನಲ್ಲಿ ನಮ್ಮ ಮನೆಗೆ ಪಾಠಹೇಳುವುದಕ್ಕೆ ಬರಬೇಕು !"

" ಆಗಲಮ್ಮಾ, ಸಂತೋಷ ! ಅಗತ್ಯವಾಗಿ ಬರುತ್ತೇನೆ. ಉಷೆ ಯಂತೆ ನೀನೂ ಮೊದಲಿನಿಂದ ಮನಸ್ಸುಕೊಟ್ಟು ಕಲಿತಿದ್ದರೆ, ಇಷ್ಟ ರಲ್ಲಿಯೆ ನಿನಗೂ ಚೆನ್ನಾಗಿ ಬರುತ್ತಿದ್ದಿತು ಸಂಗೀತ !"

" ಈಗಲಾದರೂ ಏನಾಯಿತು. ಇನ್ನು ಚೆನ್ನಾಗಿ ವ್ಯಾಸಂಗ ಮಾಡುತ್ತೇನೆ. ನಾಳೆಯಿಂದ ನೀವು ಬಂದೇ ತೀರಬೇಕು." ಎಂದು

ಹೇಳಿ, ಪ್ರಭಾ ಮನೆಗೆ ಹೊರಟಳು. ಆಕೆ ಬಾಗಿಲು ದಾಟಿ ಹೋದೊಡನೆಯೆ ಸಗೆವ ಧಾತಿನಿಂದ ಶಾಸ್ತ್ರಿಗಳು ಹೆಂಡತಿಯೊಂದಿಗೆ ಹೇಳಿದರು:

"ಸಂಗೀತ ವಿಚಾರದಲ್ಲಿ ಪ್ರಭಾ ನಿನ್ನ ಹಿರಿಯ ತಂಗಿ ನೋಡು! ಆಕೆ ಸಂಗೀತ ಕಲಿಯಬೇಕೆಂದು ತಾಯಿ-ತಂದೆಗಳಿಬ್ಬರಿಗೂ ಅದೆಷ್ಟೋ ಪ್ರೀತಿ. ಅದಕ್ಕಾಗಿಯೆ ಉಷೆಯೊಡನೆ ಪಾಠಕ್ಕೆ ಕಳುಹುತ್ತಿದ್ದರು. ಆದರೇನು! ಮರಳಲ್ಲಿ ಬಿತ್ತಿದ ಬೀಜ, ಎಷ್ಟು ನೀರು ಹಾಕಿದರೂ ಮೊಳೆತು ಮರವಾಗಬಲ್ಲದೇ?"

"ಸಂಗೀತ, ಪಂಗೀತ; ಅವನ್ನೆಲ್ಲಾ ತಕ್ಕೊಂಡು ಹೆಂಗುಸರಿಗೆ ಏನು ಪ್ರಯೋಜನವಿದೆ? ಇಲ್ಲದ್ದೊಂದು ಹುಚ್ಚಾಟ!"

"ಗಿರಿಧರನಿಗೆ ಪ್ರಭೆಯನ್ನು ಕೊಡಬೇಕೆಂದು ಆಕೆಯ ತಾಯಿ-ತಂದೆಗಳಿಗೆ ಆತುರವಿದ್ದಂತೆ ಕಾಣುತ್ತದೆ. ಪ್ರಭೆಗೂ ಗಿರಿಧರನೆಂದರೆ ತುಂಬ ವಿಶ್ವಾಸ, ಪ್ರೀತಿ. ಆದರೆ ಗಿರಿಧರನು ಪ್ರಭೆಯನ್ನು ಒಪ್ಪುತ್ತಾನೆಯೇ?" ಶಾಸ್ತ್ರಿಗಳು ಹೆಂಡತಿಯೊಂದಿಗೆ ನುಡಿದರು.

"ಅದೇನು? ಪ್ರಭೆಗೆ ಏನಾಗಿದೆ? ಬಂಗಾರದ ಬೊಂಬೆಯಂತಹ ಹುಡುಗಿ!"

"ನಿನ್ನ ಮಾತೂ ಸರೀ ಅನ್ನು. ಬಂಗಾರದ ಬೊಂಬೆಯೇನೋ ಸರಿ! ಆದರೆ ಉಷೆಯ ಯೋಗ್ಯತೆಗೆ ಪ್ರಭೆಯು ಎಂದೂ ಸರಿತೂಗಲಾರಳು."

"ಹಾಗಾದರೆ ಉಷೆಯನ್ನು ಮದುವೆಮಾಡಿಕೊಳ್ಳಬೇಕೆಂದು ಇಷ್ಟವೇ ಗಿರಿಧರನಿಗೆ?" ಸರಸಮ್ಮ ಆತುರದಿಂದ ಕೇಳಿದರು.

"ಇದ್ದರೂ ಇರಬಹುದು; ಯಶೋದಮ್ಮನವರ ಯೋಚನೆಯೂ ಹಾಗೆಯೆ ಇದ್ದಂತೆ ಕಾಣುತ್ತದೆ. ಆದರೆ ಗಿರಿಧರ ಉಷೆಗೆ ತಕ್ಕವನಾದ ವರನಲ್ಲ ನೋಡು! ಒಂದುವೇಳೆ ಅವರಿಬ್ಬರಲ್ಲಿ ಮದುವೆಯಾದರೆ, ನನ್ನ ನಿನ್ನ ಸಂಸಾರವಿಲ್ಲವೇ! ಹೀಗಾಗುವುದು, ಆಯಿತು!"

ಸರಸಮ್ಮ ಕೊಂಚವೂ ಕೋಪಗೊಳ್ಳಲಿಲ್ಲ. ತನ್ನ ಗಂಡ ತನ್ನೊಡನೆ ಇಷ್ಟೊಂದು ಮನಸ್ಸು ಬಿಚ್ಚಿ ಮಾತನಾಡುತ್ತಿದ್ದಾನೆ ಎಂಬ ಹಿಗ್ಗಿನಲ್ಲಿ ಕೋಪವನ್ನು ಅಡಗಿಸಿಬಿಟ್ಟಿರಬಹುದು. ಮರುಕಗೊಂಡವರಾಗಿ ಸರಸಮ್ಮ ನುಡಿದರು:

"ಹಾಗಾದರೆ ಪಾಪ, ಪ್ರಭೆಯ ತಾಯಿ ವಿಪರೀತ ನೊಂದು-ಕೊಳ್ಳುತ್ತಾರೆ. ಏನೋ, ಸ್ವಲ್ಪ ಕಿರಿಚಿಕೊಳ್ಳಲಿಕ್ಕೆ ಬಂದರೇನಾಯಿತು; ಉಷೆಯು ಪ್ರಭೆಗೆ ಸಮಾನಳಾಗುತ್ತಾಳೆಯೆ? ಗಿರಿಧರನಿಗೆ ಪ್ರಭೆಯೇ ತಕ್ಕ ಹೆಂಡತಿ. ಆಕೆ ಮುಡಿಯನ್ನು ಎಷ್ಟು ಚೆಂದಚೆಂದವಾಗಿ ಕಟ್ಟಿ-ಕೊಳ್ಳುತ್ತಾಳೆ! ಹೂಮಾಲೆ ಹೇಗೆ ಸೊಗಸಾಗಿ ಮುಡಿಯುತ್ತಾಳೆ! ಸೀರೆಯನ್ನೆಷ್ಟು ಸುಂದರವಾಗಿ ಉಡುತ್ತಾಳೆ! ಆಕೆ ಕುಳಿತರೆ ಚೆಂದ, ನಿಂತರೆ ಚೆಂದ. ಜಹಾಗೀರುದಾರರ ಸೊಸೆಯಾಗಲಿಕ್ಕೆ ಪ್ರಭೆಯೇ ತಕ್ಕವಳು!"

"ಪ್ರಭೆಯಾದರೇನು, ಉಷೆಯಾದರೇನು! ನಿನಗೊಂದು ಮದು-ವೆಯ ಊಟ ಸಿಕ್ಕರೆ ಆಗಲಿಲ್ಲವೆ?" ಎಂದು ನಗೆಯಾಡುತ್ತ ಶಾಸ್ತ್ರಿಗಳು ಹೊರಕ್ಕೆ ಹೊರಟುಬಿಟ್ಟರು. ಹೊತ್ತಾಗುವುದೆಂಬ ನೆಪದಿಂದ ಶಾಸ್ತ್ರಿ-ಗಳನ್ನು ಸಂಗೀತದಿಂದ ಎಬ್ಬಿಸಿಬಿಟ್ಟ ಸರಸಮ್ಮನವರು, ಮೊಗಸಾಲೆ ಯಲ್ಲಿಯೇ ಯೋಚಿಸುತ್ತ ಕುಳಿತಿದ್ದರು. ಅವರು ತಮ್ಮ ಯೋಜನಾ-ರಾಜ್ಯದಲ್ಲಿ ಗಿರಿಧರನ ಜೊತೆಗೆ ಒಮ್ಮೆ ಪ್ರಭೆಯನ್ನು ಕುಳ್ಳಿರಿಸಿ ನೋಡು-ವರು; ಮತ್ತೊಮ್ಮೆ ಉಷೆಯನ್ನು ಕುಳ್ಳಿರಿಸಿ ನೋಡುವರು. ಮುಂದೆ ಸಿಕ್ಕಬಹುದಾಗಿದ್ದ ಮದುವೆಯೂಟದ ಗಲಾಟೆಯಲ್ಲಿ ಅಂದು ಶಾಸ್ತ್ರಿಗಳ ಮಧ್ಯಾಹ್ನದೂಟಕ್ಕೆ ಮೂರುಗಂಟೆಯಾಯಿತು.

---

## ೬ನೆಯ ಪರಿಚ್ಛೇದ

"ಉಷಾ! ಉಷಾ!" ಎಂದು ಕರೆಯುತ್ತ ಸುದರ್ಶನನು ಉಷೆಯ ಕಿರುಮನೆಗೆ ಬಂದ. ಕುಳಿತುಕೊಂಡಿದ್ದ ಹಾಸುಗೆಯಲ್ಲಿಯೇ ಮಲಗಿ-ಕೊಂಡು ಉಷಾ ನಿದ್ರಿಸುತ್ತಲಿದ್ದಾಳೆ. ಬಳಿಯಲ್ಲಿಯೆ ಗಿರಿಧರನು ತಂದುಕೊಟ್ಟಿದ್ದ ಕರವಸ್ತ್ರವು ಬಿದ್ದಿದೆ. ಹೆಣಿಕೆಯ ಸಾಧನಗಳೂ ಅಲ್ಲಿಯೆ ಬಿದ್ದುಕೊಂಡಿವೆ. ಸುದರ್ಶನನು ಒಳಕ್ಕೆ ಬಂದವನೇ ಮಲಗಿದ್ದ ಉಷೆಯನ್ನು ನೋಡಿದ.

"ಓ! ಹೆಣೆಯುತ್ತಿರುವಾಗಲೆ ನಿದ್ದೆಬಂದುಬಿಟ್ಟಿದೆಯೇನೋ ಇವಳಿಗೆ!" ಎಂದು ಗಟ್ಟಿಯಾಗಿ ನುಡಿದ. ಎಚ್ಚರಾಗುವಂತಿದ್ದರೆ

ಆಗಲೆಂದೇ ಈ ಮಾತನ್ನವನು ಆಡಿರಬಹುದು. ಆದರೆ ಈ ಮಾತು ಉಷೆಯ ನಿದ್ದೆಯ ಬಿಗುಹನ್ನು ಬಿಡಿಸುವುದಕ್ಕೆ ಸಮರ್ಥವಾಗಲಿಲ್ಲ.

ಸುದರ್ಶನನು ಕರವಸ್ತ್ರವನ್ನು ತೆಗೆದುಕೊಂಡು ನೋಡಿದ. ಅದರ ಮೇಲೆ, ಮೊದಲಿನ ಸಕ್ಸೆಯ ಕಲೆಯಿಂದ ಕೊಂಚವೂ ಹೆಚ್ಚುಕಡಿಮೆ ಯಾಗದಂತೆ ತೋರುವ—ಹೊಸತಾಗಿ ತೆಗೆದ—ಅಕ್ಷರಗಳು ಕಣ್ಣಿಗೆ ಬಿದ್ದುವು. ಓದಿದ; "ಸುದರ್ಶನ" ಎಂದು ಅಕ್ಷರಗಳು. ಕೊನೆಯ ನಕಾರದ ತಲೆಕಟ್ಟು ಇನ್ನೂ ಪೂರ್ಣವಾಗಿರಲಿಲ್ಲ. ಹೆಣೆಯುತ್ತಲಿದ್ದ ಸೂಜಿ, ಪವಣಿಸಿದ್ದ ಮೆರುಗಿನ ಜರಿಯೆಳೆಯಿಂದ ಕೂಡಿಕೊಂಡು ವಸ್ತ್ರದಲ್ಲಿಯೆ ವಸತಿಮಾಡಿದ್ದಿತು. ಹಠಾತ್ತಾಗಿ ಸುದರ್ಶನನ ಮುಖದಿಂದ ಮಾತೊಂದು ಹೊರಬಿದ್ದಿತು.

"ಗಿರಿಧರನು ಪ್ರೀತಿಯಿಂದ ತಂದುಕೊಟ್ಟ ವಸ್ತ್ರ. ಇದರ ಮೇಲೆ ನನ್ನ ಹೆಸರೇತಕ್ಕೆ ಬೇಕಾಯಿತೋ !"

ವಸ್ತ್ರವನ್ನು ಮೊದಲಿದ್ದಲ್ಲಿಯೆ ಇಟ್ಟು, ಮೇಜಿನ ಬಳಿಯ ಕುರ್ಚಿಯ ಮೇಲೆ ಸುದರ್ಶನನು ಕುಳಿತುಕೊಂಡ. ಮೇಜಿನ ಮೇಲೆ ಕವಿಪ್ರವರ ರವೀಂದ್ರನಾಥರ '**ನೌಕಾಭಂಗ**' ಎಂಬ ಕಾದಂಬರಿಯು ಅರ್ಧ ಓದಿದುದಾಗಿ—ಬೋರಲಾಗಿ ಬಿದ್ದುಕೊಂಡಿದ್ದಿತು. ಸುದರ್ಶನನು ಮೊದಲು ಆ ಪುಸ್ತಕವನ್ನು ಕೈಯಲ್ಲಿ ತೆಗೆದುಕೊಂಡು, ನಾಲ್ಕಾರು ಹಾಳೆಗಳನ್ನು ಹಾಗೆ ಹೀಗೆ ಮಗುಚಿಹಾಕಿದ, ಬಳಿಕ ಉಷೆಯು ಬೇಗನೆ ಎಚ್ಚರಿಯುವ ಸಂಭವವಿದೆಯೇನೆಂದು ನೋಡಲು ನೋಟವನ್ನು ಉಷೆಯ ಕಡೆಗೆ ಹೊರಳಿಸಿದ.

ಉಷೆಯು ಮಲಗಿದುದಕ್ಕೆ ಎದುರಾಗಿ, ಎಂದರೆ ಸುದರ್ಶನನು ಕುಳಿತ ಕುರ್ಚಿಯ ಎಡಗಡೆಗೆ ದೊಡ್ಡದೊಂದು ಕಿಟಕಿಯಿದ್ದಿತು. ಕಿಟಕಿ ಯಿಂದ ಒಳನುಗ್ಗಿ ಬರುವ ಬೆಳಕು, ಉಷೆಯ ಅಂಗಾಂಗಳೆಲ್ಲವನ್ನೂ ಬೆಳಗಿಸಿದ್ದಿತು. ಆಗ ಆಕೆ ತಿಳಿಯಾದ ಗುಲಾಬಿಯ ಪತ್ತಲವನ್ನುಟ್ಟಿ ದ್ದಳು. ಗಿಳಿಯ ಹಸಿರುಬಣ್ಣದ ರೇಶಿಮೆಯ ಕುಪ್ಪಸವಿತ್ತು ಮೈಯಲ್ಲಿ. ಎಡದ ಅಂಗೈ ತಲೆಗೆ ದಿಂಬಾಗಿದ್ದಿತು. ಬಲದ ಹಸ್ತವು ಸೆರಗು ಸರಿದ ಎದೆಯ ಮೇಲೆ ಇದ್ದಿತು. ಸಿರಿವಂತಿಕೆಯಲ್ಲಿ ಬೆಳೆದ ಆಕೆಯ ದುಂಡು-

ದೋಳಿನ ಸೊಬಗು, ಬಿಗಿಯಾದ ತೋಳಿನ ರೇಶಿಮೆಯ ಕುಪ್ಪಸದೊಡನೆ ಎದ್ದುಕಾಣುತ್ತಿದ್ದಿತು. ಹರಯದ ಮೊದಲ ಮೆಟ್ಟಿಲಿನ ಪೂರ್ಣತೆಯು ದೇಹಕ್ಕೆ ದೊರೆತು, ಬೆಳುದಿಂಗಳಿಗೆ ನರುಗಂಪು ಬೆರೆತಂತಾಗಿದ್ದಿತು. ಹಾಲು ಗಲ್ಲಿನ ಬಣ್ಣದಲ್ಲಿ ಕೊಂಚ ಬೆಳಗುಗೆಂಪನ್ನೂ ಇನ್ನೂ ಕೊಂಚ ಹಣ್ಣು ಲಿಂಬೆಯ ಹಳದಿಯನ್ನೂ ಬೆರೆಯಿಸಿದಂತಹ ಮೈಬಣ್ಣ. ಕಿಟಕಿಯಿಂದ ನುಗ್ಗಿಬರುವ ಸುಳಿಗಾಳಿಯು ಮುಂದಲೆಯ ಸುರುಳಿಗುರುಳುಗಳನ್ನೂ ಉಟ್ಟಸೀರೆಯ ಸಡಿಲುಬಿದ್ದ ಭಾಗವನ್ನೂ ಮೆಲ್ಲಮೆಲ್ಲಗೆ ಕುಣಿಸುತ್ತಲಿದೆ. ನಡುಹಣೆಯ ತಿಲಕವು ಮುಖದ ಚೆಲುವಿಗೆ ಹೊಸಹೊಸ ಒಪ್ಪ ಹಾಕುತ್ತಲಿದೆ. ತುಟಿಯ ತಳಿರಲ್ಲಿ ಪವಡಿಸಿದ ಮೆಲುನಗೆಯು, ಎಡಬಲದ ತುಂಬುಗೆನ್ನೆಯ ಗುಲಾಬಿಗಳಲ್ಲಿಯೂ ಕೈಕಾಲುಗಳನ್ನು ಚಾಚಿಕೊಂಡಿದೆ. ಕನಸನೇನೋ ಕಾಣುತ್ತಿರುವಂತೆ ಮುಖದ ಮೇಲೆ ಬೆರಗಿನ ಭಾವವಿದೆ. ನಿದ್ರೆಯೂ ಆಕೆಯ ಚೆಲುವನ್ನು ಹೆಚ್ಚಿಸುವ ತೊಡವಿನಂತಾಗಿದೆ. ಕಂಡುದೆಲ್ಲವನ್ನೂ ಕಂಡುಗವಾಗಿ ಹೇಳುವ ಕವಿಯೊಬ್ಬನು ಯಾವನಾದರೂ ಅಲ್ಲಿ ಇದ್ದರೆ, ಉಷೆಯ ನಿದ್ರೆಯ ಉಸಿರುಗಳನ್ನು ಯಾವು ಯಾವುದಕ್ಕೆ ಹೋಲಿಸಿ ಹೇಳುತ್ತಿದ್ದನೇನೋ !

ಸ್ವಾಭಾವಿಕವಾಗಿ ಹೊರಳಿ ನೋಡಿದ ಸುದರ್ಶನನ ನೋಟವು ಉಷೆಯ ಚೆಲುವಿನಲ್ಲಿ ಕೀಲಿಸಿಬಿಟ್ಟಿತು. ತನ್ನನ್ನು ತಾನೆ ಮರೆತವನಾಗಿ ಬೆರಗುನೋಟದಿಂದ— ಅಡಿಯಿಂದ ಮುಡಿಯ ವರೆಗೆ— ಅಂಗಾಂಗಗಳಲ್ಲಿಯೂ ನೋಟವನ್ನು ನಿಲ್ಲಿಸಿ ನಿಲ್ಲಿಸಿ, ಉಷೆಯನ್ನು ನೋಡಿಯೇ ನೋಡಲು ತೊಡಗಿದನು. ಅರಿಯದ ಅನುಭವವೊಂದನ್ನಾಗ ಅಂತರಂಗದಲ್ಲಿಯೆ ಅನುಭವಿಸಿದನು. ಈ ಅನುಭವದಿಂದ ಸುದರ್ಶನನಿಗೆ ಆನಂದವಾಯಿತೋ ವ್ಯಸನವಾಯಿತೋ ತಿಳಿಯೆವು: ಮುಖವು ವಿಕಸಿತವಾಗಿದ್ದರೂ ನಿಟ್ಟುಸಿರೊಂದು ಹೊರಕ್ಕೆ ಹೊರಟುಬಂದಿತು.

ಇದ್ದುದಿದ್ದ ಹಾಗೆಯೆ ಉಷೆಯ ಮುಖದ ಮೆಲುನಗೆ ಹಾರಿ, ಕಾರುಣ್ಯಭಾವವು ನೆಲೆಯೂರಿತು. ಬರುಬರುತ್ತ ಭೀತಿಯು ಅದರ ಸ್ಥಾನವನ್ನು ಆಕ್ರಮಿಸಿತು. ಸುದರ್ಶನನು ಈ ಎಲ್ಲ ಭಾವಾಂತರಗಳನ್ನೂ ಎವೆಯಿಕ್ಕದೆ ನೋಡುತ್ತಿದ್ದ. ಉಷೆಯು ಒಮ್ಮೆಲೆ ಕೂಗಿಕೊಂಡಳು:

"ಸುದರ್ಶನ!....ಹಾವು....ಎದೆಯಮೇಲೆ...."

ಸುದರ್ಶನನು ತಟ್ಟನೆ ಎದ್ದುಬಿಟ್ಟ. ಮಿಂಚಿನಂತೆ ಮುಂದುವರಿದು ಹೋಗಿ, ಉಷೆಯ ಎದೆಯ ಮೇಲಿನ ಕೈಯನ್ನು ತೆಗೆದೊಗೆದ. ಕಂಪಿಸು ತ್ತಿರುವ ಆಕೆಯ ಮೈಮೇಲೆಲ್ಲ ಕೈಯಾಡಿಸುತ್ತ "ಉಷಾ! ಉಷಾ!" ಎಂದು ಕೂಗಿ ಎಚ್ಚರಿಸಲು ತೊಡಗಿದ. ಉಷೆಯು ಕಣ್ದೆರೆದು ನೋಡಿದಳು, ಬಳಿಯಲ್ಲಿ ಸುದರ್ಶನ. ಹೆದರಿಕೆಯಿಂದ ಅದಿರುತ್ತಿರುವ ತನ್ನ ಮೈಯ ಮೇಲೆ ಕೈಯನ್ನಾಡಿಸುತ್ತಿದ್ದಾನೆ. ನಾಚಿಕೊಂಡವಳಾಗಿ ಉಷೆಯು ಎದ್ದು ಕುಳಿತಳು, ಸೆರಗನ್ನು ಸರಿಮಾಡಿಕೊಂಡಳು; ಬಿದ್ದಿದ್ದ ಕರವಸ್ತ್ರ ವನ್ನು ಹಾಗೆಯೆ ಮುದ್ದೆಮಾಡಿ ಮಡಿಲಿಗೆ ಸೇರಿಸಿಕೊಂಡಳು. ನಾಚಿಕೆಯ ನಸುನಗೆಯೊಂದಿಗೆ ನುಡಿದಳು:

"ಏನಿದು, ಹಾಳು ಕನಸು!"

ಉಷೆಯು ಕನವರಿಸಿದ ಕೂಗನ್ನು ಕೇಳಿಯೋ ಏನೋ, ಗಿರಿಧರನೂ ಕಿರುಮನೆಯೊಳಕ್ಕೆ ಬಂದ. ನಾಚಿಕೆಯ ಮೊಗದ ಉಷೆಯನ್ನೂ ಬಳಿ ಯಲ್ಲಿಯೆ ಕುಳಿತ ಸುದರ್ಶನನನ್ನೂ ನೋಡಿದ. ಹೃದಯದಲ್ಲಿ ಎಂತೆಂತಹ ಭಾವಗಳು ಉದಯವಾದುವೋ! ಆತನ ಮುಖದಲ್ಲಿ ಆದ ಸ್ಥಿತ್ಯಂತರ ಗಳನ್ನು ಲಕ್ಷ್ಯಗೊಟ್ಟು ಉಷೆಯೂ ನೋಡಲಿಲ್ಲ, ಸುದರ್ಶನನೂ ನೋಡಲಿಲ್ಲ. ಸುದರ್ಶನನು ಗಿರಿಧರನನ್ನು ಕುರಿತು ತಮಾಷೆಯ ನಗೆ ಯೊಡನೆ ನುಡಿದ:

"ಕನವರಿಸಿ ಕೂಗಿದಳು ನೋಡು! ಎದೆಯ ಮೇಲೆ ಕೈಯಿಟ್ಟು ಕೊಂಡು ಮಲಗಿದರೆ ಯಾರಿಗೂ ಹೀಗೆಯೆ ಆಗುವುದು. ಮಲಗಿದಾಗ ಎದೆಯ ಮೇಲೆ ಕೈಬಿದ್ದಿತೋ, ಕೆಟ್ಟಕನಸುಗಳಿಗೆ ಔತನಕೊಟ್ಟಂತಾ ಗುತ್ತದೆ!"

ಗಿರಿಧರನು ಒಂದು ವಿಧದ ವಿಚಿತ್ರಧ್ವನಿಯಲ್ಲಿ ಕೇಳಿದನು; ಕೇಳು ತಿರುವಾಗಲೆ ಕುರ್ಚಿಯ ಮೇಲೆ ಕುಳಿತುಕೊಂಡನು:

"ನೀನು ಇದುವರೆಗೆ ಇಲ್ಲಿಯೇ ಇದ್ದೆಯೇನು?"

"ಇಲ್ಲಿಯೇ ನೀನು ಕುಳಿತಲ್ಲಿ ಕುಳಿತಿದ್ದೆ. ಮಧ್ಯಾಹ್ನ ಜೈಮಿನಿ ಭಾರತದಲ್ಲಿಯ ಸೀತಾವನವಾಸದ ಭಾಗವನ್ನು ಓದಿಹೇಳಬೇಕೆಂದು

ಉಷಾ ಹೇಳಿದ್ದಳು. ಅದಕ್ಕಾಗಿ ಇಲ್ಲಿಗೆ ಬಂದೆ; ಮಲಗಿಕೊಂಡುದರಿಂದ ಎಚ್ಚರಾಗುವ ವರೆಗೆಂದು ಇಲ್ಲಿಯೆ ಕುಳಿತುಬಿಟ್ಟೆ. ಒಮ್ಮೆಂದೊಮ್ಮೆಲೆ 'ಸುದರ್ಶನ! .. ಹಾವು .. ಎದೆಯ ಮೇಲೆ ..' ಎಂದು ಉಷಾ ಕೂಗಿಕೊಂಡಳು. ನಾನು ಓಡಿಬಂದು, ಎದೆಯ ಮೇಲಿನ ಕೈಯನ್ನು ತೆಗೆದುಹಾಕಿ ಎಚ್ಚರಿಸಿದೆನು. ಏನು ಉಷಾ, ಅಷ್ಟೊಂದು ಹೆದರಿದೆಯೇಕೆ? ಕನಸಿನಲ್ಲಿ ಏನು ಕಂಡೆ?"

"ಏನು ಹೋಗಪ್ಪಾ, ಹಾಳು ಕನಸು! ಇದುವರೆಗೂ ಎದೆಯ ನಡುಕ ಬಿಟ್ಟಿಲ್ಲ!"

"ಅದೇನು ಕನಸು ಹೇಳಬಾರದೇ?" ಗಿರಿಧರನು ತವಕದಿಂದ ಕೇಳಿದ; ಉಷೆಯು ಆತನ ಕಡೆಗೆ ಮುಖಮಾಡಿ ಹೇಳಲು ತೊಡಗಿದಳು:

"ನೋಡು ಗಿರಿಧರ! ನಾನು, ನೀನು, ಸುದರ್ಶನ ಮೂವರೂ ಯಾವುದೋ ಒಂದು ಕಾಡಿನಲ್ಲಿ ಅಲೆಯುತ್ತಿದ್ದೆವು. ವಿಚಿತ್ರವಾದ ಕಾಡು. ಎಲ್ಲೆಲ್ಲಿಯೂ ಮಬ್ಬು ಮುಸುಕಿದ್ದರೂ ಕಾಡಿನ ಗಿಡ-ಮರ-ಬಳ್ಳಿಗಳೂ, ಬಣ್ಣಬಣ್ಣದ ಹೂಗಳೂ ಸ್ಪಷ್ಟವಾಗಿ ಕಾಣುತ್ತಿದ್ದುವು. ಇದ್ದುದಿದ್ದ ಹಾಗೆಯೆ ದೊಡ್ಡದೊಂದು ಹಾವು ಬಂದಿತು. ಅದೆಂತಹ ಹಾವು! ನಾಲ್ಕುಮಾರುದ್ದ, ಮೈಯೆಲ್ಲವೂ ಬಣ್ಣಬಣ್ಣದ ಚುಕ್ಕಿಗಳು, ಮೊರದಗಲದ ಹೆಡೆ; ಕೆಂಡದಂತಹ ಕಣ್ಣುಗಳನ್ನು ತೆರೆದು, ಸುದರ್ಶನನ ಕಡೆಗೆ ನೋಡಿಯೆ ನೋಡುತ್ತಿದ್ದಿತು."

ಉಷೆಯು ಸುದರ್ಶನನ ಕಡೆಗೆ ತಿರುಗಿ ಮಾತನಾಡಲಾರಂಭಿಸಿದಳು:

"ಸುದರ್ಶನ, ಆ ಹಾವು ನಿನ್ನನ್ನು ಏನು ಮಾಡುತ್ತದೆಯೊ ಎಂಬ ಹೆದರಿಕೆಯಿಂದ, ಅಳುವು ಉಕ್ಕಿ ಉಕ್ಕಿ ಬರುತ್ತಿದ್ದಿತು ನೋಡು. ಹಠಾತ್ತಾಗಿ ಗಿರಿಧರನು ಓಡುತ್ತ ಬಂದ; ಆ ಹಾವನ್ನೆತ್ತಿ ನನ್ನ ಮೈಯ ಮೇಲೆ ಚೆಲ್ಲಿಬಿಟ್ಟ. ನಾನು ಹೆದರಿ ಬಿದ್ದುಕೊಂಡುಬಿಟ್ಟೆ. ಹಾವು ನನ್ನ ಎದೆಯ ಮೇಲೆ ಕುಳಿತುಕೊಂಡು, ಕಚ್ಚುವುದಕ್ಕೆ ಹೆಡೆಯನ್ನು ಮುಂದಕ್ಕೆ ಚಾಚಿತು. ಭೀತಿಯಿಂದ ಗಟ್ಟಿಯಾಗಿ ಕೂಗಿಕೊಂಡುಬಿಟ್ಟೆ. . ಏನೋ ವಿಚಿತ್ರವಾದ ಕನಸು! . ."

ಗಿರಿಧರನು ನಿಶ್ಚಿಂತಭಾವದವನಾಗಿ ನುಡಿದ:

"ಕನಸಿಗೇನು— ತಲೆಯಿಲ್ಲ, ಬಾಲವಿಲ್ಲ; ನಿದ್ದೆಯಲ್ಲಿ ಅನೇಕ ಕನಸುಗಳನ್ನು ಕಾಣುತ್ತೇವೆ. ನಮ್ಮ ಕ್ಲಬ್ಬಿನಲ್ಲಿ ನನ್ನ ಜೊತೆಯ ರೂಮಿನಲ್ಲಿಯೆ ಒಬ್ಬ ಹುಡುಗನಿದ್ದಾನೆ. ಆತನು ಒಂದು ದಿವಸವೂ ತಪ್ಪದಂತೆ ಕನಸಿನಲ್ಲಿ ಕೂಗಿಕೊಳ್ಳುತ್ತಾನೆ. ಹತ್ತಿರಿದ್ದವರೆಲ್ಲ ಗಾಬರಿಯಾಗುತ್ತಾರೆ ಆತನ ಕೂಗು ಕೇಳಿ. ಸರಿ! ಇನ್ನು ನಿಮ್ಮ ಜೈಮಿನಿಭಾರತದ ಅಭ್ಯಾಸ ನಡೆಯಬೇಕೇನೊ, ನಡೆಯಲಿ! ನನ್ನದೇನು ಕೆಲಸವಿಲ್ಲಿ? ಹೊರಟು ಬಿಡುತ್ತೇನೆ" ಗಿರಿಧರನು 'ಹೊರಟುಹೋಗುತ್ತೇನೆ' ಎಂದು ನುಡಿದನಾದರೂ,ಎದ್ದುಹೋಗುವ ಲಕ್ಷಣಗಳೇನೂ ತೋರಲಿಲ್ಲ. ಸುದರ್ಶನನು ಸ್ವಾಭಾವಿಕವಾದ ಮಾತಿನಲ್ಲಿ ಕೇಳಿದನು :

"ಏಕೆ, ಜೈಮಿನಿಭಾರತ ಕೇಳುವುದಕ್ಕೆ ನಿನಗೆ ಬೇಸರವೇನು? ನಿಮ್ಮದು ವಿಜ್ಞಾನಶಾಸ್ತ್ರ; ಸಾಹಿತ್ಯವು ರುಚಿಸುವುದೇ ನಿಮಗೆ?"

"ಹಾಗೇನೂ ಅಲ್ಲ; ನೀನು ಹೇಳುವವನು, ಉಷಾ ಕೇಳುವವಳು; ನಡುವೆ ನನ್ನದೇನು ಕೆಲಸ–ಎಂದಿಷ್ಟೇ!"

ಗಿರಿಧರನ ಧ್ವನಿಯು ಸುದರ್ಶನನ ಎದೆಯನ್ನು ಅಲುಕಿಸಿತು; ಕಕ್ಕಾವಿಕ್ಕಿಯಾಗಿ ಆತನು ನುಡಿದ :

"ಇದೇನೋ ಗಿರಿಧರ! ಏನೇನೋ ವಿಚಿತ್ರವಾಗಿ ಮಾತನಾಡುತ್ತಿದ್ದೀಯಲ್ಲಾ.. ನೀನು, ಈವೊತ್ತು?"

ಮುಖತೊಳೆದುಕೊಂಡು ಬರಲಿಕ್ಕೆ ಹೋದ ಉಷಾ ಮರಳಿ ಅಲ್ಲಿಗೆ ಬಂದಳು. ಜೈಮಿನಿಭಾರತದ ಪುಸ್ತಕವನ್ನು ತಂದು ಸುದರ್ಶನನ ಕೈಯೊಳಗೆ ಕೊಟ್ಟಳು. ಗಿರಿಧರನು ಕುಳಿತಲ್ಲಿಯೇ ಕುಳಿತಿದ್ದ. ಸುದರ್ಶನನ ಓದಿಹೇಳುವ ಪದ್ಧತಿಯು, ಆತನ ಮನಸ್ಸು ನಿಂತಲ್ಲಿ ನಿಲ್ಲದಿದೆಯೆಂಬುದನ್ನು ಒಡೆದು ತೋರಿಸುತ್ತಿದ್ದಿತು. ಗಿರಿಧರನು ಮಾತನೇನೂ ಆಡದೆ, ಸುದರ್ಶನನ ಕಾವ್ಯವಾಚನವನ್ನು ಕಿವುಡುಗೇಳುತ್ತ ಕುಳಿತಿದ್ದನು. ಏನೇನೋ ಸಂದರ್ಭವೊದಗಿದಾಗ, ಆತನು ಒಂದೆರಡು ಸಲ ಬಿಗುಹಿನ ಧ್ವನಿಯಲ್ಲಿ ಒಂದೆರಡು ಮಾತುಗಳನ್ನು ಆಡಿರಬಹುದು.

---

# ೭ನೆಯ ಪರಿಚ್ಛೇದ

ಅಪ್ಪಣರಾಯರ ಊಟವಾಗಿ ವಾಮಕುಕ್ಷಿ ಮುಗಿಯಿತು. ಎದ್ದು ಮುಖ ತೊಳೆದುಕೊಂಡು, ಅಡಿಕೆಲೆ ಅಗಿಯುತ್ತ, ತಮ್ಮ ಕಿರುಮನೆಯಲ್ಲಿಯೆ ಕುಳಿತಿದ್ದರು. ನಿಶ್ಚಿಂತತೆಯು ಅವರ ಮುಖದ ಮೇಲೆ ನಿರಾ-ತಂಕವಾಗಿ ವಾಸಿಸುತ್ತಿದ್ದಿತು. ವೆಚ್ಚಕ್ಕೆ ಬೇಕಾಗುವುದಕ್ಕಿಂತ ಇಮ್ಮಡಿ ಮುಮ್ಮಡಿಯಷ್ಟು ಆದಾಯವಿರುವಾಗ, ಅವರ ಮನೆಯಲ್ಲಿ ಚಿಂತೆಗೆ ಕಾಲಿಡುವುದಕ್ಕೆ ಎಡೆಯೆಲ್ಲಿ? ಅನ್ನದ ಅಭಾವವು ಇಲ್ಲದಿದ್ದರೆ, ಜಗತ್ತಿನಲ್ಲಿ ಚಿಂತೆಗೆ ತನ್ನ ಸಂತೆ ನೆರೆಯಿಸುವುದಕ್ಕೆ ಸ್ಥಳವೇ ಸಿಕ್ಕುತ್ತಿರಲಿಲ್ಲವೇನೊ! ರಾಯರು ಅನುಭವಿಸುತ್ತಲಿರುವ ವೈಭವಜೀವನಕ್ಕಾಗಿ, ಅವರ ಹಳ್ಳಿಯ ರೈತರು ಹನ್ನೆರಡು ತಿಂಗಳೂ—ನಿರಶನವ್ರತದಿಂದ—ಚಳಿಗಾಳಿಯೆನ್ನದೆ —ಬಿಸಿಲುಮಳೆಯೆನ್ನದೆ— ತಪಶ್ಚರ್ಯವಮಾಡುತ್ತಿರುವರು. ಇದಕ್ಕೆ ಪ್ರತಿಫಲವಾಗಿ ರಾಯರು, ತಮ್ಮ—ತಮ್ಮ ಮನೆಯವರ ಚಿಂತೆ-ಶೋಕಗಳನ್ನು ರೈತರಿಗೆ ಹಂಚಿಕೊಟ್ಟುಬಿಟ್ಟಿದ್ದರು. ರೈತರ ಹೆಂಡಿರು-ಮಕ್ಕಳ ಹೊಟ್ಟೆಯಲ್ಲಿ ಬೀಳಬೇಕಾಗಿದ್ದ ಆಹಾರಸಾಮಗ್ರಿಯೆಲ್ಲ ರಾಯರ ಮನೆಯ ಉಗ್ರಾಣವನ್ನು ತುಂಬುತ್ತಿದ್ದಿತು; ಅವರ ಮೈಯನ್ನು ಮುಚ್ಚಬೇಕಾಗಿದ್ದ ಬಟ್ಟೆಯ ಬೆಲೆಯೆಲ್ಲ ಇವರ ಭಾಂಡಾರದಲ್ಲಿ ಮರೆಯಾಗಿ ಬಿಡುತ್ತಿದ್ದಿತು. ತಮ್ಮ ನಿಶ್ಚಿಂತತೆಯ ಸಲುವಾಗಿ ಅದೆಷ್ಟು ಬಡಜೀವಿಗಳು ಬಾಯಿಬಾಯಿ ಬಿಡುತ್ತವೆಂಬುದರ ಕಲ್ಪನೆಯು, ರಾಯರ ಮೆದುಳನ್ನು ಒಂದು ಕ್ಷಣಕಾಲವಾದರೂ ಸೋಂಕುತ್ತಿದ್ದಿತೋ ಇಲ್ಲವೋ ಹೇಳಲಾರೆವು. ರೈತರ ಮನೆಯಲ್ಲಿ ಹೊಟ್ಟೆಗೆ ಹಾಲಿಲ್ಲದೆ ಕೂಗಿ ಕಿರಿಚುತ್ತಿರುವ ಎಳಮಕ್ಕಳ ಚೀರುದನಿಯು, ರಾಯರ ಮನೆಯಲ್ಲಿ ರಾಗದ ಪೆಟ್ಟಿಗೆಯ ಸುಮಧುರಸ್ವರವಾಗಿ ಕೇಳುವುದು. ಚಳಿಗಾಳಿಗೆ ನಡುಗುತ್ತಿರುವ ಅವರ ಬರಿಮೈಯ್ಯ ದುಡಿತವು, ರಾಯರ ಮನೆಗೆ ಹೊರೆಹೊರೆಯಾಗಿ ಮೆರುಗಿನ ಬಟ್ಟೆಗಳನ್ನೊದಗಿಸುವುದು. ಬಡತನದ ಬಾಳಿನ ಎದೆಗುದಿಯಿಂದ ಯಾವಾಗಲೂ ರೈತರು ಸುರಿಸುತ್ತಿರುವ ಕಂಬನಿಗಳ ಕಾಲುವೆಯು, ರಾಯರ ಮನೆಯಲ್ಲಿ ಹಾಲು-ಶುಪ್ಪಗಳ ಹೊಳೆಯಾಗಿ

ಹರಿಯುವುದು. ಯಯಾತಿರಾಜನ ಸೌಖ್ಯಕ್ಕಾಗಿ ಆತನ ಹೊಟ್ಟೆಯ ಮಗನು ಸ್ವಾರ್ಥತ್ಯಾಗ ಮಾಡಿದುದರಿಂದ, ನಮ್ಮ ಪುರಾಣ-ಪುಣ್ಯ ಕಥೆಗಳು ಅವನನ್ನು ತಲೆಯಮೇಲಿಟ್ಟುಕೊಂಡು ಕುಣಿದಾಡಿವೆ; ಈಗಲೂ ಕುಣಿಯುತ್ತಲಿವೆ. ಆದರೆ ಪರಸ್ಪರರಲ್ಲಿ ಯಾವ ಸಂಬಂಧವೂ ಇಲ್ಲದೆ, ಹಣವಂತರ ಸೌಖ್ಯಕ್ಕಾಗಿ ಬಡವರು ಪಡುತ್ತಲಿರುವ ಭವಣೆಗಳ ಕಡೆಗೆ, ತೋರಿಸುವ ಸ್ವಾರ್ಥತ್ಯಾಗದ ಕಡೆಗೆ ಕಣ್ಣುಬಿಟ್ಟು ನೋಡುವವರೇ ಇಲ್ಲ. ಬಲ್ಲಿದರು ಎತ್ತಿದರೆ ಅಡಕೆ ಆನೆಯಂತಹದು; ಬಡವರು ಎತ್ತಿದರೆ ಆನೆಯೂ ಅಡಕೆಯಂತಹದು.

ಅರುವತ್ತು ವರ್ಷದವರಾದರೂ ಉಲ್ಲಾಸದ ಮೂರ್ತಿಯಂತಿರುವ ರಾಯರು, ಯಾವುಯಾವುವೋ ಆನಂದದ ಕಣಸುಗಳನ್ನು ಕಾಣುತ್ತ ಕುಳಿತಿದ್ದರು. ಅವರ ಹೆಂಡತಿ ಯಶೋದಮ್ಮನವರು ಮನಸ್ಸಿನ ಮಾತನ್ನು ತಿಳುಹಲಾಶಿಸುವ ಮೆಲುನಗೆಯ ಮೊಗದಿಂದ ಅಲ್ಲಿಗೆ ಬಂದರು. ಗಂಡನ ಬಳಿಯಲ್ಲಿಯೆ ವಿನಯದಿಂದ ಕುಳಿತರು. ಮಾತನಾಡಬೇಕೆಂಬ ಕುತೂಹಲವು ಮುಖದ ಮೇಲೆಲ್ಲ ಕುಣಿಯುತ್ತಲಿದೆ; ರಾಯರು ನಗೆಗಣ್ಣಿನಿಂದ ಹೆಂಡತಿಯನ್ನು ನೋಡುತ್ತ ಮಾತನಾಡಿದರು:

"ಏನು ? ಒಳ್ಳೆಯ ಹುರುಪಿನ ನಡಿಗೆಯಲ್ಲಿಯೆ ಬಂದುಬಿಟ್ಟೆ ? ನೋಡು, ನಿನಗೆ ಐವತ್ತು ವರ್ಷದ ವಯಸ್ಸು; ಇನ್ನೂ ಹುಡುಗಿಯ ಹಾಗೆ ಕಾಣುತ್ತೀಯೇ. ಸುಳ್ಳಲ್ಲ ! ನಮ್ಮ ಪುರೋಹಿತರ ಹೆಂಡತಿಯನ್ನು ನೋಡಿಲ್ಲವೇ ? ಅವಳಿಗೂ ನಿನ್ನಷ್ಟೇ ವಯಸ್ಸು; ಬಾಯಲ್ಲಿಯ ಹಲ್ಲು ಬಿದ್ದಿವೆ; ತಲೆಯೆಲ್ಲ ನೆರೆತು ಹಂಜಿಯ ಬುಟ್ಟಿಯಂತಾಗಿದೆ. ಇದೆಲ್ಲವೂ ನಮ್ಮ ಭೈರವನ ಅನುಗ್ರಹ ನೋಡು. ನಮ್ಮ ಹಿರಿಯರಿಗೆ ವಜ್ರ-ದೇಹ ಕೊಟ್ಟಿದ್ದನಂತೆ; ನಮಗೆ ನಿರೋಗದೇಹವನ್ನು ಕೊಡುವುದು ಹೆಚ್ಚಿನ ಮಾತೇ ?"

"ಸರಿ, ಭೈರವನಾಯಿತು, ಬಸವಣ್ಣನಾಯಿತು. ನಾಳೆಯ ಅಕ್ಷಯತೃತೀಯೆಗೆ ಗಿರಿಧರನಿಗೆ ಇಪ್ಪತ್ತುಮೂರು ವರ್ಷ ತುಂಬಿದುವು. ಕಲಿಸುವುದು—ಕಲಿಸುವುದು—ಎಂದು ಇದುವರೆಗೂ ಮದುವೆಯನ್ನು ನಿಲ್ಲಿಸಿದ್ದಾಯಿತು. ನನಗೇನೋ ಯಾವಾಗಲೂ ಆತನ ಮದುವೆಯ

ಯೋಚನೆಯೇ ಯೋಚನೆಯಾಗಿದೆ. ಕನಸುಗಳನ್ನು ಕಂಡರೂ ಗಿರಿಧರನ ಮದುವೆಯ ವಿಷಯಕ್ಕೆ ಸಂಬಂಧಿಸಿದುವುಗಳೇ!"

"ಅಹುದೇ! ನಮ್ಮ ಶಾರದಕ್ಕನೂ ಒಂದೆಸವನೆ ಗಂಟೇ ಬಿದ್ದಿದ್ದಾಳೆ—ಪ್ರಭೆಯನ್ನು ಗಿರಿಧರನಿಗೆ ತೆಗೆದುಕೊಳ್ಳಿ—ಎಂದು. ನಾನೂ ಆಕೆಯ ಮಾತಿಗೆ ಅರ್ಧಮರ್ಧ ಸಮ್ಮತಿಸಿದಂತೆ ಮಾಡಿದ್ದೇನೆ. ನಿನ್ನನ್ನೂ ಒಂದು ಮಾತು ಕೇಳಿ, ಪೂರ್ಣವಾಗಿ ಒಪ್ಪಿಗೆ ಕೊಡಬೇಕೆಂದು ನನ್ನ ಅಭಿಪ್ರಾಯ. ನೀನೇನೆನ್ನುತ್ತೀ? ಮಾಡುವುದೇ ಆದರೆ ತಡೆಯೇನಿದೆ? ನಾಳೆಯ ಜ್ಯೇಷ್ಠದಲ್ಲಿ ಮಾಡಿಬಿಡಬಹುದಲ್ಲವೇ ಮದುವೆಯನ್ನು? ನೋಡು, ಪ್ರಭಾ ಒಳ್ಳೆಯ ಹುಡುಗಿಯಲ್ಲವೇ? ಚಿಕ್ಕವಳಿದ್ದಾಗ ನೀನಿದ್ದೆಯಲ್ಲ; ಅದಕ್ಕಿಂತ ಚೆನ್ನಾಗಿದ್ದಾಳೆ ಪ್ರಭಾ! ನನ್ನ ಮದುವೆಯ ಸಂದರ್ಭ ಈಗ ಇದ್ದರೆ ನಿನ್ನನ್ನು ಬಿಟ್ಟು ಪ್ರಭೆಯನ್ನೇ ಆರಿಸುತ್ತಿದ್ದೆ!"

"ಸರಿ! ಯಾವಾಗಲೂ ಹುಚ್ಚು ಹುಡುಗಾಟವೆ. ಅದಿರಲಿ, ನಾನೆನ್ನುತ್ತೇನೆ. ಪ್ರಭೆಯೆನೋ ಒಳ್ಳೆಯ ಹುಡುಗಿ, ತುಂಬ ಚೆಲುವೆಯಾಗಿದ್ದಾಳೆ. ಸರಿ, ಆದರೆ ಉಷೆಗೆ ಸಮಾನಳಾಗಲಾರಳು!"

"ಅದೇಕೆ? ಉಷಾ ನಿನ್ನ ಅಣ್ಣನ ಮಗಳೆಂದೋ?"

"ಇದೇನು ಮಾತು? ಇದ್ದ ಮಾತನ್ನು ಇದ್ದ ಹಾಗೆ ಹೇಳಿದೆ. ನಿಮಗೆ ತೋರುವುದಿಲ್ಲವೇ.. ರೀತಿ-ನಡತೆಗಳಲ್ಲಿ ಉಷಾ ಹೇಗಿರುತ್ತಾಳೆ ಎಂಬುದು?"

"ಅಹುದೇ! ಉಷೆಯೇನೋ ಒಳ್ಳೆಯ ಹುಡುಗಿಯೇ; ಬುದ್ಧಿವಂತೆ, ಚೆನ್ನಾಗಿ ಹಾಡುತ್ತಾಳೆ. ಆದರೇನು! ಅತ್ತೆ, ಮಾವ ಇದ್ದರೆ ಅಳಿಯಂದಿರಿಗೆ ಒಂದು ಸೊಗಸು; ಅಸಾರೇ ಖಲು ಸಂಸಾರೇ ಸಾರಂ ಶ್ವಶುರ ಮಂದಿರಂ—ಎಂದು ಜ್ಞಾನಿಗಳು ಹೇಳಿದ್ದಾರಲ್ಲವೇ? ಉಷೆಗೆ ಹಡೆದ ತಾಯಿಯಿಲ್ಲ; ತಂದೆಯಿದ್ದರೆ ಬೇರೆಯವಳನ್ನು ಮದುವೆಮಾಡಿಕೊಂಡು ಬಿಟ್ಟಿದ್ದಾನೆ. ಆತನಿಗೆ ಉಷೆಯ ವಿಷಯದಲ್ಲಿ ಅಷ್ಟೊಂದೇನು ಆಸಕ್ತಿ? ಇಷ್ಟುದಿನವಾಯಿತು, ಮಗಳನ್ನು ನೋಡಿಕೊಂಡು ಹೋಗಲಿಕ್ಕೆ ಒಂದು ಸಲವಾದರೂ ಬಂದಿದ್ದಾನೆಯೆ? ಇದ್ದೂ ಇಲ್ಲದಂತಹ ತಂದೆ ಆತ. ಹೀಗಿರಲು ನಮ್ಮ ಗಿರಿಧರನಿಗೆ ಮಾವನ ಮನೆಯ ಸೊಗಸು ಹೇಗೆ

ಸಿಕ್ಕಬೇಕು ? ನಾನು ನಿಜ ಹೇಳುತ್ತೇನೆ ಕೇಳು; ನಿನಗೆ ತಂದೆ-ತಾಯಿ ಜೀವಿಸಿರದಿದ್ದರೆ ನಾನು ನಿನ್ನನ್ನು ಮದುವೆಯಾಗುತ್ತಲೇ ಇರಲಿಲ್ಲ ! ''

ಯಶೋದಮ್ಮ ಕಂಬನಿ ಮಿಡಿಯುತ್ತ ಮರುಕದ ದನಿಯಲ್ಲಿ ನುಡಿದರು :

'' ಪಾಪ! ಉಷೆಗೆ ತಂದೆ-ತಾಯಿಗಳ ಸೌಖ್ಯವೇನೊ ಇಲ್ಲವೇ ಇಲ್ಲ; ಒಳ್ಳೆಯ ಗಂಡನ ಸೌಖ್ಯವನ್ನಾದರೂ ಆಕೆ ಪಡೆಯಲಿ ! ನನಗೆ ಹೆಣ್ಣು ಮಕ್ಕಳಿಲ್ಲದುದರಿಂದ ಚಿಕ್ಕತನದಿಂದಲೂ ಆಕೆಯನ್ನು ಸಾಕಿ ಸಲಹಿದ್ದೇನೆ. ಗಿರಿಧರ, ಉಷಾ ಒಂದೇ ಮನೆಯಲ್ಲಿ ಬೆಳೆದಿದ್ದಾರೆ. ಇನ್ನೂ ಒಂದು ಮಾತು: ಗಿರಿಧರನ ಇಚ್ಛೆಯೂ ಉಷೆಯನ್ನೇ ಮದುವೆಮಾಡಿಕೊಳ್ಳ ಬೇಕೆಂದು ಇದೆಯೆಂಬುದು ನನಗೆ ಗೊತ್ತಾಗಿದೆ.''

'' ಸರಿ ! ಗಿರಿಧರನ ಇಚ್ಛೆ, ನಿನ್ನ ಇಚ್ಛೆ ಇದ್ದರೆ ಆಯಿತಲ್ಲ ! ನನ್ನ ದೇನೂ ತಡೆಯಿಲ್ಲ. ಇಷ್ಟೇ : ಹೊರಗಾದರೂ ಏತಕ್ಕೆ ಹುಡುಕಬೇಕು ? ತಂಗಿಯ ಮಗಳು ! ಕರುಳಿನ ಬಳಗದಲ್ಲಿಯೇ ಬರಲಿ—ಎಂದು ನಾನು ಪ್ರಭೆಯು ಆಗಬಹುದೆಂದಿದ್ದೆ. ಅಲ್ಲದೆ ಶಾರದಕ್ಕ ಹುಮ್ಮಸಿನವಳು, ಗಿರಿಧರನು ಅವಳ ಅಳಿಯನಾದರೆ ಸೊಗಸು—ಎಂತಲೂ ನನಗೆನಿಸಿದ್ದಿತು. ಏನೇ ಆಗಲಿ, ಮದುವೆಯಲ್ಲಿ ಬೆಳ್ಳಿಕೋಟೆಯ ಭೈರವನ ಪಲ್ಲಕ್ಕಿಯನ್ನು ಮನೆಗೆ ತರಿಸುವುದನ್ನು ಮಾತ್ರ ಮರೆಯಲಾಗದು; ತಿಳಿಯಿತೇ ? ''

'' ಅತ್ತೆಮ್ಮಾ! ಅತ್ತೆಮ್ಮಾ! '' ಎಂದು ಕರೆಯುತ್ತ ಉಷಾ ಅಲ್ಲಿಗೆ ಬಂದಳು. ಸ್ನೇಹಪೂರಿತ ನಯನದಿಂದ ನೋಡುತ್ತ ಯಶೋದಮ್ಮ ಉಷೆಯ ಕೈಯನ್ನು ಪ್ರೀತಿಯಿಂದ ಹಿಡಿದು ನಿಲ್ಲಿಸಿ ಮಾತನಾಡಿದರು:

'' ನೋಡಿ ! ನನ್ನ ಕೂಸು ವಸಂತಮಾಸದ ಗೌರಿಯಾಗಿದ್ದಾಳೆ. ಗಿರಿಧರನಿಗೆ ತಕ್ಕ ಜೊತೆ. ರತಿ-ಮನ್ಮಥರಂತಹ ದಾಂಪತ್ಯ! ಏನಮ್ಮಾ ಉಷಾ, ಗಿರಿಧರನು ಗಂಡನಾದರೆ ನಿನಗೆ ಒಪ್ಪಿಗೆಯಲ್ಲವೇ ? ''

'' ಉಷೆಯ ಮುಖವು ಆರಕ್ತವಾಯಿತು. ನೋಟವು ನೆಲವನ್ನು ನೋಡಲು ತೊಡಗಿತು. ಎದೆಯಲ್ಲಿ ಸಿಡಿಲು ಗುಡುಗಿದಂತಾಯಿತೆಂದು ಹೇಳಿದರೂ ಹೇಳಬಹುದು. ಕೊಂಚ ವೇಳೆಯಲ್ಲಿಯೆ ಮೊಗವೆತ್ತಿ ತಗ್ಗಿದ ದನಿಯಲ್ಲಿ ಹೇಳಿದಳು:

" ಇಳಿಹೊತ್ತಿನ ಕಾಫಿಯೊಡನೆ ಆಹಾರವನ್ನೇನು ಮಾಡಬೇಕೆಂದು ಅಡಿಗೆಯವನು ಕೇಳಿದ; ನೀನು ಇಲ್ಲಿ ಕುಳಿತಿದ್ದೀಯೆಂದು ನಾನೇ ಕೇಳಲಿಕ್ಕೆ ಬಂದೆ. "

" ಸರಿ, ಈಗ ನಾನೇ ಬರುತ್ತೇನೆ ತಡೆ " ಎಂದು ಉಷೆಯೊಡನೆ ಮಾತನಾಡಿ, ಯಶೋದಮ್ಮ ರಾಯರ ಕಡೆಗೆ ನೋಡುತ್ತ ನುಡಿದರು :

" ಗಿರಿಧರ-ಉಷೆಯರ ಲಗ್ನದೊಂದಿಗೆ ಸುದರ್ಶನನ ಲಗ್ನವನ್ನೂ ಏತಕ್ಕೆ ಮಾಡಿಬಿಡಬಾರದು ? ಪಾಪ! ಪರದೇಶಿ ಹುಡುಗ! ಮಗನ ಬುದ್ಧಿ-ವಂತಿಕೆ ನೋಡಲು ತಾಯಿತಂದೆ ಬದುಕಿರಲಿಲ್ಲ. " ಮಾತಿನ ಕೊನೆಯೊಡನೆಯೆ ಸ್ತ್ರೀಸ್ವಭಾವೋಚಿತವಾದ ಮರುಕದ ಉಕ್ಕು ಹೊರಕ್ಕೆ ಸೂಸಿತು.

" ಮಾಡಬೇಕಾಗಿದ್ದರೆ ಆತನ ಲಗ್ನವನ್ನೂ ಈಗಲೇ ಮಾಡಿಬಿಡೋಣ. ಬುದ್ಧಿವಂತ ಹುಡುಗ; ಯಾರೂ ಕುಣಿಕುಣಿದಾಡುತ್ತ ಹೆಣ್ಣುಕೊಡುತ್ತಾರೆ. ಸುದರ್ಶನನು ಒಳ್ಳೆಯ ಹುಡುಗ; ಆದರೆ ಮೊದಲಿನಿಂದಲೂ ನಾನು ನೋಡುತ್ತೇನಲ್ಲಾ ! ಆತನಿಗೆ ನಮ್ಮ ಭೈರವನಲ್ಲಿ ಭಕ್ತಿ-ವಿಶ್ವಾಸಗಳು ಕಡಿಮೆ. ಆದರೂ ನಮ್ಮ ಮನೆಯಲ್ಲಿದ್ದ ಹುಡುಗ; ಎಂದಮೇಲೆ ಭೈರವನು ಆತನ ಕಲ್ಯಾಣ ಮಾಡದಿರುತ್ತಾನೆಯೆ ? "

" ಬುದ್ಧಿವಂತ ಹುಡುಗ ! ಯಾರೂ. . . . ಹೆಣ್ಣು ಕೊಡುತ್ತಾರೆ" ಎಂದು ರಾಯರು ನುಡಿಯುತ್ತಿರುವಾಗ, ಉಷೆಯು ಆಶೆಯ ನೋಟದಿಂದ ರಾಯರ ಕಡೆಗೊಮ್ಮೆ, ಯಶೋದಮ್ಮನವರ ಕಡೆಗೊಮ್ಮೆ ನೋಡುತ್ತಿದ್ದಳು. ಹೃದಯವು ಒಳಗೊಳಗೆ ಏನನೋ ಜಿನುಗುತ್ತಲಿದ್ದಿತು.

" ಏನೇ ಆಗಲಿ, ಗಿರಿಧರನ ಮದುವೆಯಂತೂ ಈ ಸಲ ಆಗಲೆಬೇಕು!" ಎಂದು ನುಡಿಯುತ್ತ ಯಶೋದಮ್ಮ ಎದ್ದುಬಿಟ್ಟರು; ಕಿರುಮನೆಯನ್ನು ಬಿಟ್ಟು ಹೊರಕ್ಕೆ ಹೊರಟರು. ಉಷೆಯೂ ಅವರನ್ನು ಅನು-ಸರಿಸಿ ನಡೆದಳು.

ರಾಯರು ಮುಖವನ್ನೆತ್ತಿ— ಹೊಸತಾಗಿಯೇ ನೋಡುವವರಂತೆ

ಬೆರಗುನೋಟದಿಂದ ಉಷೆಯನ್ನು—ಆಕೆ ಮರೆಯಾಗುವವರೆಗೂ ನೋಡುತ್ತಿದ್ದರು. ಬಳಿಕ ಮನದಲ್ಲಿ ಎಂದುಕೊಂಡರು:

"ನಿಜವಾಗಿಯೂ ಪ್ರಭೆಗಿಂತ ಉಷಾ ಚೆನ್ನಾಗಿದ್ದಾಳೆ. ನಾನು ಇದುವರೆಗೆ ಸರಿಯಾಗಿ ನೋಡಿರಲೇ ಇಲ್ಲ. ಈಕೆ ಗಿರಿಧರನ ಹೆಂಡತಿಯಾದರೆ, ನಿಶ್ಚಯವಾಗಿಯೂ ಆತನ ಜೀವನ ಆನಂದಮಯವಾಗುತ್ತದೆ. ಪ್ರಭಾ ಚೆಲುವೆಯಾದರೂ ತನ್ನ ತಾಯಿಯಂತೆ ಹಟದ ಸ್ವಭಾವದವಳು. ಕನ್ಯೆಯರ ಪರೀಕ್ಷೆಯಲ್ಲಿ ಗಂಡುಸರಿಗಿಂತ ಹೆಂಗುಸರೇ ಹೆಚ್ಚು ಸುರಿತವರೆನ್ನಬಹುದು! ಎಂತಲೇ ನಮ್ಮಾಕೆ ಉಷೆಯೇ ಇರಲೆಂದು ಹೇಳುತ್ತಿದ್ದಾಳೆ. ಸರಿ, ಯಾರಾದರೇನು! ಗಿರಿಧರನಿಗೆ ಒಬ್ಬಳು ಸುಂದರಿಯಾದ ಹೆಂಡತಿ ಸಿಕ್ಕರೆ ಸಾಕು; ನಮಗೇನು ದುಡ್ಡುಬೇಡ, ದುಗ್ಗಾಣಿ ಬೇಡ!"

---

## ೮ನೆಯ ಪರಿಚ್ಛೇದ

ಪ್ರಭೆಯ ಮನೆಯ ನಡಮೆಯಲ್ಲಿ ಪ್ರಭೆಯ ತಾಯಿ ಶಾರದಮ್ಮ, ಶಾಸ್ತ್ರಿಗಳ ಹೆಂಡತಿ ಸರಸಮ್ಮ ಮಾತನಾಡುತ್ತ ಕುಳಿತಿರುವರು:

"ಏನು ಶಾರದಮ್ಮಾ, ನಿಮಗೆ ಗೊತ್ತೇ ಇಲ್ಲವೆಂದು ಕಾಣುತ್ತದೆ. ಅಪ್ಪಣರಾಯರು ನಿಮ್ಮ ದಾಕ್ಷಿಣ್ಯಕ್ಕಾಗಿ, ನಿಮ್ಮೆದುರು ಪ್ರಭೆಯನ್ನು ತಂದುಕೊಳ್ಳುತ್ತೇನೆಂದು ಹೇಳುತ್ತಿರಬಹುದು; ಆದರೆ ಯಶೋದಮ್ಮನದು ಗಿರಿಧರನದು—ಎಲ್ಲರದೂ ಇಚ್ಛೆಯಂತೆ—ಉಷೆಯನ್ನೇ ತಂದುಕೊಳ್ಳಬೇಕೆಂದು. ಮನೆಯಲ್ಲಿ ಮಾತು-ಕಥೆ ಕೂಡ ನಡೆದಿದೆಯಂತೆ."

"ಉಷೆಯನ್ನು ತಂದುಕೊಳ್ಳುವರಂತೆ? ನಿಮಗೆ ಹೇಗೆ ಗೊತ್ತಾಯಿತು ಸರಸಕ್ಕಾ?"

"ನನಗೆ ಗೊತ್ತಾಗದೆ ಆಗುತ್ತದೆ ಏನು! ನಮ್ಮ ಮನೆಯವರು ಆಗಾಗ ಅವರ ಮನೆಗೆ ಹೋಗುತ್ತಿರುವುದಿಲ್ಲವೇ! ಅಪ್ಪಣರಾಯರೇ ಈ ಮಾತನ್ನು ನಮ್ಮವರೆದುರು ಹೇಳಿದರಂತೆ. ಎಂತಹ ಹುಚ್ಚು ಜನ ನೋಡಿ ಶಾರದಮ್ಮಾ! ಪ್ರಭೆ ಚಿನ್ನದಂತಹ ಹುಡುಗಿ; ಅಲ್ಲದೆ ನೀವು ಬೇಕಾದ ಹಾಗೆ ಕೊಡುವವರು ಕೊಳ್ಳುವವರು ಇದ್ದೀರಿ. ಉಷೆಯನ್ನು

ತಂದುಕೊಂಡರೆ ಏನು ಸಿಕ್ಕುತ್ತದೆ ಮಣ್ಣು? ಮಣ್ಣೇ ಸಿಕ್ಕಿದರೆ ಸೈ! ತಾಯಿ ನೋಡಿದರೆ ಮಲತಾಯಿ; ಅಪ್ಪನಂತೂ 'ಬದುಕಿ ಇದ್ದೀಯಾ. ಸತ್ತಿದ್ದೀಯಾ' ಎಂಬುದನ್ನೂ ವಿಚಾರಿಸುವುದಿಲ್ಲ. ಯಶೋದಮ್ಮನಿಗೆ ಹುಚ್ಚುಗಿಚ್ಚು ಹಿಡಿದಿದ್ದೀತೇನು? ಉಷೆಯನ್ನು ತೆಗೆದುಕೊಂಡರೆ ಅವರಿಗೇನು ಲಾಭ?''

ರೋಷದ ಧ್ವನಿಯಲ್ಲಿ ಶಾರದಮ್ಮ ನುಡಿದರು:

' ಲಾಭ, ಹಾನಿ! ಇದರಲ್ಲಿ ಲಾಭ-ಹಾನಿಯ ಮಾತು ಸ್ವಲ್ಪವೂ ಇಲ್ಲ. ಎಲ್ಲವೂ ನನಗೆ ಗೊತ್ತು. ಮೊದಲಿನಿಂದಲೂ ಯಶೋದಮ್ಮನಿಗೆ ನನ್ನನ್ನು ಕಂಡರೆ ಆಗುವುದಿಲ್ಲ; ಅದಕ್ಕಾಗಿಯೇ ಗಿರಿಧರನ ನೆಪ ಮಾಡಿ ಕೊಂಡು, ಇಲ್ಲದ್ದೊಂದನ್ನು ಹೇಳಿ, ಪಾಪ! ಆ ಮರುಳ ಅಪ್ಪಣ್ಣನ ಕಿವಿಯಲ್ಲಿ ಏನೇನನೋ ತುಂಬಿದ್ದಾಳೆ ಕಾಣುತ್ತದೆ. ಅವಳು ಹ್ಯಾಗೆ ಇದ್ದಾಳೆ— ಮೆತ್ತನೆಯ ಕಳ್ಳೆ; ಮಹಾ ತಂತ್ರಗಾತಿಯವಳು. ನೋಡಿ ಸರಸಮ್ಮಾ, ನಾನೇನು ಕಡಿಮೆಯಾಗಿಲ್ಲ; ಅಪ್ಪಣ್ಣನ ಕಿವಿಯನ್ನು ಚೆನ್ನಾಗಿ ಹಿಂಡಿ, ಪ್ರಭೆಯನ್ನು ತೆಗೆದುಕೊಳ್ಳುವಂತೆ ಮಾಡುತ್ತೇನೆ!''

"ಇನ್ನೊಂದು ಮಾತು ಇದೆ ಅಲ್ಲವೇ! ಗಿರಿಧರನು, ಮದುವೆ ಯಾಗುವುದಾದರೆ ಉಷೆಯನ್ನೇ ಆಗುವನಂತೆ; ಇಲ್ಲದಿದ್ದರೆ ತನಗೆ ಮದುವೆಯೇ ಬೇಡವೆಂದು ಹಟ ಹಿಡಿದಿರುವನಂತೆ!''

"ಅವನಿಗೇನು ತಿಳಿಯುತ್ತದೆ ಮಣ್ಣು! ಒರಿ ನಾಲ್ಕು ಇಂಗ್ಲಿಷ್ ಪುಸ್ತಕ ಓದಿದರೆ ಜಗತ್ತೆಲ್ಲ ತಿಳಿದಂತಾಯಿತೇ? ಅವನ ಕಿವಿಯಲ್ಲಿಯೂ ಆ ಹಾಳು ಯಶೋದೆಯೇ ಏನನಾದರೂ ಊದಿರಬಹುದು. ಮೊದಲಿ ನಿಂದಲೂ ಗಿರಿಧರನದು ಪ್ರಭೆಯಲ್ಲಿ ಮಮತೆ. ಚಿಕ್ಕತನದಿಂದಲೂ ನಾವು 'ಪ್ರಭೆಯ ಗಂಡ, ಪ್ರಭೆಯ ಗಂಡ' ಎಂದು ವಿನೋದಮಾಡುತ್ತ ಲಿದ್ದೇವೆ. ಇಷ್ಟೇ ಅಲ್ಲ, ಮೊನ್ನೆ ಮೊನ್ನೆ ಕೂಡ ಗಿರಿಧರ ತಾನಾಗಿಯೆ "ನೀನು ಚೆನ್ನಾಗಿ ಸಂಗೀತ ಕಲಿಯಬೇಕು'ಎಂದು ಪ್ರಭೆಗೆ ಹೇಳಿದನಂತೆ. ಅದಕ್ಕಾಗಿಯೇ ಶಾಸ್ತ್ರಿಗಳಿಗೆ ದಿನಾಲು ಪಾಠಹೇಳಲಿಕ್ಕೆ ಬರುವಂತೆ ಹೇಳಬೇಕಾಯಿತು. ಗಿರಿಧರನ ವಿಷಯದಲ್ಲಿ ಪ್ರಭೆಯ ಪ್ರೀತಿಯಂತೂ ಎಷ್ಟಿದೆಯೆನ್ನುತ್ತೀರಿ ಸರಸಕ್ಕಾ; ಅಷ್ಟಿಷ್ಟೆಂದು ಹೇಳುವ ಹಾಗಿಲ್ಲ

ನೋಡಿರಿ. ಹಗಲು ಹನ್ನೆರಡು ತಾಸೂ ಗಿರಿಧರನ ವರ್ಣನೆ ತಪ್ಪಿರುವು ದಿಲ್ಲ. 'ಗಿರಿಧರನು ಹಾಗೆ ಇದ್ದಾನೆ, ಹೀಗೆ ಇದ್ದಾನೆ; ಅದನ್ನು ಮಾಡಿದ, ಇದನ್ನು ನೋಡಿದ; ನಿನ್ನೆ ಹಾಡಿದ, ಇಂದು ಕುಣಿದ..' ಎಂದು ಎಷ್ಟು ಆತನ ವಿಚಾರ ಹೇಳಿದರೂ ಆಕೆಗೆ ತೃಪ್ತಿಯಿಲ್ಲ.''

''ಪ್ರಭೆಯು ವಿಷಯವೇನು ನನಗೆ ಗೊತ್ತಿಲ್ಲವೇ— ಬಿಡಿ ಶಾರ ದಮ್ಮಾ! ಆಕೆ ಜಡೆ ಹೇಗೆ ಕಟ್ಟಿಕೊಳ್ಳುತ್ತಾಳೆ, ಸೀರೆ ಹೇಗೆ ಉಡು ತ್ತಾಳೆ, ಮಾಲೆ ಹೇಗೆ ಮುಡಿಯುತ್ತಾಳೆ! ಅವಳು ನಡೆಯುತಿರುವಾಗ ನನಗಂತೂ ಅವಳನ್ನು ನಿಂತು ನಿಂತು ನೋಡುವ ಹಾಗೆ ಆಗುತ್ತದೆ. ಮುಖ್ಯವೇನು; ಗಿರಿಧರನಿಗೆ ಪ್ರಭೆಯ ಜೊತೆ ಸೇರಿದರೆ ಗೌರೀ-ಗಂಗಾ ಧರರು ಸೇರಿದಂತಾಗುವುದು ನೋಡಿ. ಬರಿಯೆ ಒಂದೆರಡು ಪುಸ್ತಕ ಓದಲಿಕ್ಕೆ, ಆ ಎಂದು ಒಂದೆರಡು ಹಾಡು ಕೂಗುವುದಕ್ಕೆ ಬಂದರೆ ಏನಾದಹಾಗಾಯಿತು? ಪ್ರಭೆಯ ಯೋಗ್ಯತೆ ಉಷೆಗೆ ಬರಬೇಕಾದರೆ ಅವಳು ಹನ್ನೆರಡು ವರುಷ ತಪಸ್ಸುಮಾಡಿ, ವರಪಡೆದು ಬರಬೇಕು. ಜಹಗೀರುದಾರರ ಸೊಸೆಯಾಗುವಂತಹ ಮುಖವೇ ಅವಳದು? ನೀವು ಹೇಳಿದ ಹಾಗೆಯೇ ನೋಡಿ, ಶಾರದಮ್ಮಾ, ಇದೆಲ್ಲವೂ ಆ ಯಶೋದ ಮ್ಮನ ಮಂತ್ರವೇ ಇರಬಹುದಲ್ಲವೇ?''

''ಅವಳದೇ, ನಿಶ್ಚಯವಾಗಿಯೂ ಅವಳದೇ! ಉಷೆಯನ್ನು ಸೊಸೆಯನ್ನಾಗಿ ಮಾಡಿಕೊಂಡು ಮನೆಯಲ್ಲಿ ಬಾಳಿಸಿಕೊಳ್ಳಲಿ, ನೋಡು ತ್ತೇನೆ!''

''ನಿಮ್ಮದೇನು ಬಿಡಿ, ಮನಸ್ಸಿಗೆ ಬಂದದ್ದನ್ನು ಮಾಡಿಯೇ ತೀರು ವವರು! ನನಗೇನೋ ತೋರುವುದು: ಪ್ರಭೆಯನ್ನು ಗಿರಿಧರನಿಗೆ ತೆಗೆದು ಕೊಂಡು, ಬೇಕಾದರೆ ಉಷೆಯನ್ನು ಸುದರ್ಶನನಿಗೆ ಜೊತೆಮಾಡಿದರೆ ಸರಿಹೋಗುವುದು. ಅವನೂ ಪರದೇಶಿ, ಅವಳೂ ಪರದೇಶಿ. ಅದರಿಂದಲೋ ಏನೋ, ನಮ್ಮ ಮನೆಯವರೂ ಅನ್ನುತ್ತಿದ್ದರು—ಸುದರ್ಶನನಿಗೆ ಉಷಾ ಸರಿಯಾದ ಜೊತೆ—ಎಂದು.''

''ಅದೇಕೋ ಏನೋ ನೋಡಿ ಸರಸಕ್ಕಾ, ನಮ್ಮ ಪ್ರಭೆಗೆ ಸುದರ್ಶನನನ್ನು ಕಂಡರೆ ಆಗುವುದೇ ಇಲ್ಲ. ಬಡತನದಲ್ಲಿ ಹುಟ್ಟಿ

ಬೆಳೆದದ್ದು; ಒಬ್ಬರ ಮನೆಯೊಳಗೆ ಬಂದು ಸೇರಿಕೊಂಡದ್ದು; ಆದರೂ ಅದರದೆಷ್ಟು ಜಂಭ! ಉಷೆಯು ಕೂಡ ಅವನು ಅದೆಷ್ಟೋ ಮಾತನಾಡು ತ್ತಾನಂತೆ, ಕತೆಯಾಡುತ್ತಾನಂತೆ; ಪ್ರಭೆಯು ಕೂಡ ಹೆಚ್ಚಾಗಿ ಮಾತನ್ನೇ ಆಡುವುದಿಲ್ಲವಂತೆ. ಗಿರಿಧರನ ಮನಸ್ಸನ್ನು ಅವನು ಕೆಡಿಸಿದ್ದರೂ ಕೆಡಿಸಿರಬಹುದು!"

"ಇದ್ದರೂ ಇರಬಹುದು! ಯಾರ ಮನಸ್ಸು ಹೇಗೆ ಇರುವುದೋ ತಿಳಿಯುವುದು ಹೇಗೆ? ಜನರಿಗೇನು ಹುಚ್ಚೋ ಕಾಣೆ; ಎಲ್ಲರೂ ಸುದರ್ಶನನ ಗುಣ ಹೊಗಳುವವರೆ. ಯಾರ ಬಾಯಲ್ಲಿಯೂ ಆತನ ಬುದ್ಧಿವಂತಿಕೆಯ ಕೊಂಡಾಟವೇ?"

"ಅಹುದು ನೋಡಿ, ಮೊನ್ನೆ ನಮ್ಮ ಪ್ರಭಾ ಹೇಳುತ್ತಿದ್ದಳು; ಉಷೆಯು ಕೂಡ ಯಾವಾಗಲೂ ಸುದರ್ಶನನ ಗುಣವರ್ಣನೆಯನ್ನು ಮಾಡುತ್ತಲೇ ಇರುತ್ತಾಳಂತೆ; ಆತನೊಡನೆಯೆ ಹೆಚ್ಚಾಗಿ ಮಾತು-ಕತೆ ಯಾಡುತ್ತಿರುವಳಂತೆ. ಗಿರಿಧರನ ವಿಷಯದಲ್ಲಿ ಹೆಚ್ಚಾಗಿ ಮಾತುಗಳನ್ನೇ ಎತ್ತುವುದಿಲ್ಲವಂತೆ."

"ನಾಳೆ ಹೆಂಡತಿಯಾಗುವಾಕೆ, ನಾಚಿಕೆ ತೋರಿಸಬೇಡವೇ?"

"ಅವಳಿಗೇತರ ನಾಚಿಕೆಯಮ್ಮಾ! ಬೇಕಾದ ಹಾಗೆ ಗಂಡುಸರೊಡನೆ ಕುಳಿತು ಆಡುತ್ತಾಳೆ, ಹಾಡುತ್ತಾಳೆ, ಓದುತ್ತಾಳೆ, ಬರೆಯುತ್ತಾಳೆ. ಹೇಳುತ್ತಾರಲ್ಲ—ಹುಚ್ಚು ನಾಯಿಗೆ ಹಳಸಿದ ಸುಚ್ಚಿಗೆ ಗಂಟು—ಅಂತೆ. ಸುದರ್ಶನನು ಉಷೆಯನ್ನು ಹೊಗಳಬೇಕು, ಉಷೆಯು ಸುದರ್ಶನನನ್ನು ಹೊಗಳಬೇಕು. ಒಂಟೆ-ಕಾಗೆಗಳು ಒಂದನ್ನೊಂದು ವರ್ಣಿಸಿದ ಕಥೆ ಹೇಳುತ್ತಾರೆ, ಕೇಳಿಲ್ಲವೇ ನೀವು?"

"ಹಾಗಾದರೆ ಸುದರ್ಶನನ ಮನಸ್ಸಿನಲ್ಲಿ ಉಷೆಯನ್ನು ಮದುವೆ ಯಾಗಬೇಕೆಂದು ಇರಬಹುದಲ್ಲವೆ?"

"ಇದ್ದರೂ ಇದ್ದೀತು; ನನಗೆ ಹೇಗೆ ಹೇಳಲಿಕ್ಕೆ ಬಂದೀತು?" ಎಂದು ಹೇಳುತ್ತ ಶಾರದಮ್ಮ ಮನಸ್ಸಿನಲ್ಲಿ ಏನೇನನೋ ಎಣಿಕೆ ಹಾಕಲು ತೊಡಗಿದರು:

"ಉಷೆಯು ಇಚ್ಛೆಯೂ ಸುದರ್ಶನನನ್ನು ಲಗ್ನವಾಗಬೇಕೆಂದು ಇರಬಹುದು!"

"ಇದ್ದರೂ ಇರಬಹುದು; ಆದರೆ ಗಿರಿಧರನಂತಹ ಸಿರಿವಂತನಾದ ಪತಿಯು ದೊರೆಯುತ್ತಿರುವಾಗ, ಸುದರ್ಶನನಂತಹ ಸುದಾಮನ ಸ್ನೇಹಿತನನ್ನು ಏತಕ್ಕಾಗಿ ಅವಳು ಇಚ್ಛಿಸಬೇಕು?"

"ನಿಮ್ಮ ಮಾತೂ ಸರೀ—ಎನ್ನಿ. ನಾನಿನ್ನು ಹೊರಡುತ್ತೇನಮ್ಮಾ ಹೊತ್ತಾಯಿತು."

ಕುಂಕುಮ ಹಚ್ಚಿಸಿಕೊಂಡು ಸರಸಮ್ಮ ಮನೆಗೆ ಹೊರಟರು. ಆಗಿನ ಶಾರದಮ್ಮನ ಯೋಚನೆಯು ಮುಖಮುದ್ರೆಯು ಯಾವಾಗ ಮರೆಯಾಯಿತೊ ಗೊತ್ತಾಗಲಿಲ್ಲ.

---

## ೯ ನೆಯ ಪರಿಚ್ಛೇದ

ಹೊಸದೊಂದು ಪರಿಚ್ಛೇದವನ್ನೊ ಪ್ರಕರಣವನ್ನೊ ಪ್ರಾರಂಭಿಸುವುದಕ್ಕೆ ಮೊದಲು, ಯಾವುದಾದರೊಂದು ಸ್ಥಳವನ್ನಾಗಲಿ ಕಾಲವನ್ನಾಗಲಿ ವರ್ಣಿಸುವುದು ನಮ್ಮ ಕಾದಂಬರೀಕಾರರ ಸಂಪ್ರದಾಯ. ಆ ಸಂಪ್ರದಾಯವನ್ನು ನಾವೂ ಸಾಗಿಸಬೇಕೆಂದು ನಮಗೆ ಬಲವಾದ ಅಪೇಕ್ಷೆ; ಆದರೆ ಈಗ ಯಾವ ವರ್ಣನೆಗೆ ಮೊದಲುಮಾಡಬೇಕು! ವನವರ್ಣನೆಯನ್ನು ಮಾಡಬೇಕೆಂದರೆ ಮುಂದೆ ಹೇಳಲಿರುವ ಕಥಾಭಾಗವು ಮನೆಯಲ್ಲಿಯೇ ನಡೆದುದು. ಮನೆಯನ್ನು ವರ್ಣಿಸಬೇಕೆಂದರೆ ಗೋಡೆ, ಗೂಟ, ಮಾಡ, ಕಿಟಕಿ, ಸುಣ್ಣ, ಬಣ್ಣ, ಹಂಚು, ಚಪ್ಪರ ಇವುಗಳನ್ನೆಲ್ಲ ಏತಕ್ಕೆ ಹೋಲಿಸಿ ಬಣ್ಣಿಸಿ ಹೇಳಬೇಕೋ ತಿಳಿಯದಾಗಿದೆ. ಇಂದು ಬೆಳಗಿನಲ್ಲಿ ಬೆಳಗಾಗಿದ್ದಿತೆಂದು ಅದನ್ನು ಹೊಗಳಿ ಹಾಡಲಿಕ್ಕೆ ಆರಂಭಿಸೋಣವೇ? ಹಾಗಾದರೆ ಸಾಯಂಕಾಲಕ್ಕೆ ಸಂಜೆಯೂ ಆಗುವುದಲ್ಲಾ! ಮಳೆಗಾಲ ಬರಬೇಕಾದರೆ ಇನ್ನೂ ಎರಡು ಮೂರು ತಿಂಗಳು ಹೋಗಬೇಕು; ಈಗಿದ್ದ ಮಧುಮಾಸವನ್ನೇ ಕೊಂಡಾಡಬೇಕೆಂದರೆ

ಮತ್ತೆ ಮತ್ತೆ ಆ ಮತ್ತಕೋಕಿಲ, ಮಾಮರ, ಮಲ್ಲಿಗೆ, ಅರಗಿಳಿ, ಮರಿ-ದುಂಬಿ ಇವೇ ಕಣ್ಣಮುಂದೆ ಬಂದು ನಿಲ್ಲುತ್ತವೆ. ನಮ್ಮ ಮೊದಲಿನವರಿಗಿಂತ ಹೆಚ್ಚಾಗಿ ಅವುಗಳ ಬಣ್ಣನೆಯನ್ನು ನಾವೇನು ಮಾಡಬೇಕಾಗಿದೆ? ಸಂಪ್ರದಾಯವಿರೋಧಿಯೆಂದು ನಮ್ಮ ಪರಂಪರಾಪ್ರಿಯರು ಬೈದರೂ ಬೈಯಲೊಲ್ಲರೇಕೆ! ಯಾವ ವರ್ಣನೆಗೂ ಕೈಹಾಕದೆ ನಮ್ಮ ಕಥಾ-ನಿರೂಪಣಕ್ಕೇ ತೊಡಗಿಬಿಡೋಣ.

ಉಷಾ ತನ್ನ ಕಿರುಮನೆಯಲ್ಲಿ ಕುಳಿತಿದ್ದಾಳೆ. ಕೈಯಲ್ಲಿ ತೆರೆದು ಹಿಡಿದುದೊಂದು ಪುಸ್ತಕ. ಕಂಬನಿಯಿಂದ ನನೆದ ಕಣ್ಣನೋಟವು ಅಕ್ಷರಗಳ ಸಾಲುಗಳ ಮೇಲೆ ಹಾಯ್ದುಹೋಗುತ್ತಿದ್ದಿತು; ಆದರೂ ಕಣ್ಣು ಓದಿದ ಶಬ್ದಗಳ ಅರ್ಥವನ್ನು ಗ್ರಹಿಸುವುದಕ್ಕೆ ಮನಸ್ಸು ಸಮರ್ಥವಾಗಿರಲಿಲ್ಲ. ಯಾವುಯಾವುವೋ ವಿಚಾರಗಳು ಬಂದು, ಮನೋರಂಗದಲ್ಲಿ ಕುಣಿದಾಡಿ, ಕರುಳನ್ನು ತೊತ್ತುಳಿದುಳಿದು, ಎದೆಯನ್ನು ಅಳುಕಿಸುತ್ತಿದ್ದುವು. ನಡುನಡುವೆ ನಿಡಿದಾದ ಉಸಿರುಗಳು ಕಿರುಮನೆಯ ತಣ್ಣನೆಯ ಸುಳಿಗಾಳಿಯನ್ನು ಬಿಸುಪೇರಿಸುತ್ತಿದ್ದುವು. ಇದ್ದುದಿದ್ದಹಾಗೆಯೆ ಉಷೆಯು ಕೈಯಲ್ಲಿಯ ಪುಸ್ತಕವನ್ನು ಅದರ ಸ್ಥಳದಲ್ಲಿ ಇಟ್ಟುಬಿಟ್ಟಳು. ಗಿರಿಧರನು ಕೊಟ್ಟಿದ್ದ ಕರವಸ್ತ್ರವನ್ನು ಕೈಯಲ್ಲಿ ತೆಗೆದುಕೊಂಡು, ಅದನ್ನು ಮೇಜಿನ ಮೇಲೆ ಹಾಸಿದಳು; ಅದರಲ್ಲಿಯ ಎಲ್ಲ ನಕ್ಷೆಗಳನ್ನೂ ಬಿಟ್ಟು, ತಾನು ತೆಗೆದಿದ್ದ ಅಕ್ಷರಗಳಲ್ಲಿಯೇ ನೋಟವನ್ನು ನೆಟ್ಟು, ಕುರ್ಚಿಯ ಮೇಲೆ ಕುಳಿತುಕೊಂಡಳು. ಒಂದೆರಡು ಸಲ '**ಸುದರ್ಶನ**' '**ಸುದರ್ಶನ**' ಎಂದು ಗಟ್ಟಿಯಾಗಿಯೆ ಅಕ್ಷರಗಳನ್ನೋದಿದಳು.

ಸುದರ್ಶನನು ಕಿರುಮನೆಯ ಬಾಗಿಲಿಗೆ ಬಂದ; ಅಕ್ಷರಗಳನ್ನು ನೋಡುವುದರಲ್ಲಿಯೇ ಮೈ-ಮನಸ್ಸನ್ನು ಮರೆತವಳಾದ ಉಷೆಗೆ ಅದರ ಅರಿವೇ ಇರಲಿಲ್ಲ. ಸುದರ್ಶನನಿಗೂ ಕುಳಿತಿದ್ದ ಉಷೆಯನ್ನು ಕಣ್ಣು-ಮನಗಳು ತುಂಬುವಷ್ಟು ನೋಡಬೇಕೆನಿಸಿತು. ನೋಡುವುದಕ್ಕೆ ಅವಕಾಶವೂ ಸಿಕ್ಕಿತು. ಆಗ ಕುಳಿತಿದ್ದ ಉಷೆಯ ಭಾವ-ಭಂಗಿಗಳಿಗೆ ತಾನು ಓದಿದ್ದ ಸಂಸ್ಕೃತ ಕನ್ನಡ ಕಾವ್ಯಗಳಲ್ಲಿಯ ಹಲವು ಜನ ನಾಯಿಕೆಯರ ವರ್ಣನಾಚಿತ್ರಗಳನ್ನು ಸುದರ್ಶನನು ಹೋಲಿಸಿ ಹೋಲಿಸಿ

ನೋಡಿದನು. ಆದರೆ ಉಷೆಯ ಕಂಬನಿ ಬೆರೆತ ಕಂಗಳ, ಬತ್ತಿದ ಮುಖದ, ಹೊರಡುತ್ತಿರುವ ನಿಟ್ಟುಸಿರಿನ ಅರ್ಥವೇ ಆತನಿಗೆ ಆಗಲೊಲ್ಲದು. ಉಷೆಯುನ್ನು ನೋಡುವುದರಲ್ಲಿ ಆಸಕ್ತನಾಗಿ ಆತನೂ ಮೈಮರೆತು ನಿಂತುಬಿಟ್ಟನು. ಇದ್ದುದಿದ್ದ ಹಾಗೆಯೇ ಉಷೆಯು ಕರವಸ್ತ್ರದಲ್ಲಿಯ ಅಕ್ಷರಗಳಿಗೆ ಮುತ್ತಿಟ್ಟುಬಿಟ್ಟಳು; ಪುತ್ತೆ ಅಕ್ಷರಗಳಲ್ಲಿ ನೋಟವನ್ನು ನಿಲ್ಲಿಸಿದಳು. ಸುದರ್ಶನನು ಬೆರಗಾದ ಬಗೆಯುವನಾಗಿ ಯೋಚಿಸಿದ:

"ಅಯ್ಯೋ! ಇದೇನಿದು! ನಮ್ಮಿಬ್ಬರ ಸಹಜಸ್ನೇಹವು ಪ್ರಣಯ-ರೂಪದಲ್ಲಿ ಪರಿಣಮಿಸಿದೆಯೇ ಇವಳಲ್ಲಿ! ಈ ಊರಿಗೆ ಬಂದಾಗಿನಿಂದಲೂ ಇದರ ವಾಸನೆ ಆಗಾಗ ಕೊಂಚ ಬಡಿಯುತ್ತಲಿದ್ದಿತು. ಗಿರಿಧರನು ಕೊಟ್ಟ ವಸ್ತ್ರದ ಮೇಲೆ ನನ್ನ ಹೆಸರನ್ನು ಬರೆದುದನ್ನು ನೋಡಿದಾಗ, ಕಣ್ಣಿಗೆ ಕಾಣದ ಆ ವಾಸನೆಯು ಮಸಮಸಕಾದ ರೂಪವನ್ನು ತೋರಿಸಿತು. ಈಗ ನಾನು ನೋಡುತ್ತಿದ್ದುದು ಅದರ ಸ್ಪಷ್ಟವಾದ ಪ್ರತ್ಯಕ್ಷರೂಪವನ್ನು. ಸರಿ, ಅದೆಲ್ಲ ಏನೇ ಇರಬಹುದು. ಈ ಕಂಬನಿ, ಈ ಬಿಸಿಯುಸಿರುಗಳಿಗೆ ಕಾರಣವೇನೋ ಕಾಣೆ!"

ಉಷೆಯು ಮತ್ತೊಮ್ಮೆ ಆ ಅಕ್ಷರಗಳನ್ನು ಗಟ್ಟಿಯಾಗಿ ಓದಿದಳು.

"ಸು–ದ–ರ್ಶ–ನ"

ಮೈಮರೆತು ನಿಂತ ಸುದರ್ಶನನು ಉಷೆಯ ಬಾಯಿಂದ ತನ್ನ ಹೆಸರು ಉಚ್ಚಾರವಾದುದನ್ನು ಕೇಳಿದೊಡನೆಯೆ, ಯಾವ ಯೋಚನೆಯೂ ಇಲ್ಲದೆ ತಟ್ಟನೆ ಕೇಳಿಬಿಟ್ಟನು: "ಏನು ಉಷಾ?"

ಉಷಾ ಬೆಚ್ಚಿಬಿದ್ದಳು. ಮೇಜಿನ ಮೇಲಿನ ಕರವಸ್ತ್ರವನ್ನು ಸರ್ರೆಂದು ಮುದುಡಿಸಿದಳು. ಮುಖದ ಮೇಲೆ ಬಲವಂತದ ನಗೆಯ ಮುಗುಳನ್ನು ತಂದುಕೊಂಡು ಮಾತನಾಡಿದಳು. ನಾಚಿಕೆಯು ಆಕೆಯ ಮಾತಿಗೆ ನಡುಕವನ್ನು ಹುಟ್ಟಿಸುತ್ತಿದ್ದಿತು:

"ಏನು ಸುದರ್ಶನ, ಬಾಗಿಲಲ್ಲಿಯೆ ನಿಂತುಕೊಂಡೆಯೇಕೆ? ಒಳಕ್ಕೆ ಬರಬಾರದೆ? ಯಾವಾಗ ಬಂದೆ? ನೀನು ಬಂದುದು ನನಗೆ ಗೊತ್ತೇ ಆಗಲಿಲ್ಲ ನೋಡು!"

“ಇದೇ ಈಗ ಹೀಗೆಯೇ ಬಂದೆ. ನೀನು ಯಾವುದೋ ಯೋಚನೆಯಲ್ಲಿ ಕುಳಿತುದನ್ನು ಕಂಡು ತಿರುಗಿಹೋಗುವುದರಲ್ಲಿದ್ದೆ; ಅಷ್ಟರಲ್ಲಿಯೆ ನೀನೂ ‘ಸುದರ್ಶನ’ ಎಂದು ಕೂಗಿದೆ.”

ಉಷೆಗೆ ನಸುವೆ ಧೈರ್ಯ ಬಂದಂತಾಯಿತು. ಮೂಗು ಮೇಲಕ್ಕೆ ಮಾಡಿಕೊಂಡು ನಡೆಯುವ ಧೈರ್ಯದ ಜೊತೆಗೆ, ತಲೆತಗ್ಗಿಸಿ ನಡೆಯುವ ನಾಚಿಕೆ ನಿಲ್ಲುವುದೇ? ಉಷೆಯ ಮನದ ಅದೆಷ್ಟು ಭಾಗವನ್ನು ಧೈರ್ಯವು ಎತ್ತಿ ಹಿಡಿದಿದ್ದಿತೋ ಅದಷ್ಟು ಭಾಗದಲ್ಲಿ ನಾಚಿಕೆಗೆ ಎಡೆ ದೊರೆಯಲಿಲ್ಲ. ಆದರೆ ತಾನು ‘ಸುದರ್ಶನ’ ಎಂದು ನುಡಿದುದು ಸುದರ್ಶನನ ಕಿವಿಗೆ ಬಿದ್ದುದನ್ನು ತಿಳಿದು, ಮನದ ಬಹುಭಾಗವನ್ನು ನಾಚಿಕೆಗೇ ಒಕ್ಕಲಾಗಿರಲಿಕ್ಕೆ ಆಕೆ ಕೊಟ್ಟಿದ್ದಳು. ಏನೋ ಮಾತನಾಡಬೇಕೆಂದು ಆಡಿದಳು :

“ನೌಕಾಭಂಗವನ್ನು ಓದುತ್ತ ಕುಳಿತಿದ್ದೆ. ಅದರಲ್ಲಿ ಬರುವ ನಳಿನಾಕ್ಷ ಡಾಕ್ಟರನ ಸ್ವಭಾವ–ಗುಣಗಳು ನನ್ನ ಹೃದಯವನ್ನು ತುಂಬ ಸೆಳೆದುಬಿಟ್ಟುವು; ಅದನ್ನೇ ವಿಚಾರಿಸುತ್ತ ಕುಳಿತಿದ್ದೆ. ಆತನ ಸ್ವಭಾವಕ್ಕೂ ನಿನ್ನ ಸ್ವಭಾವಕ್ಕೂ ತುಂಬ ಹೋಲಿಕೆ ಕಂಡಿತು. ಅದನ್ನು ಯೋಚಿಸುತ್ತ ಕುಳಿತಿರುವಾಗ, ಅದೇಕೋ ನಿನ್ನ ಹೆಸರು ಬಾಯಲ್ಲಿ ಬಂದಿತು. ನೀನು ಬಂದು ನಿಂತುದನ್ನು ನಾನು ನೋಡಿರಲೇ ಇಲ್ಲ!”

ಸುದರ್ಶನನು ತನ್ನ ಸುಳ್ಳಿಗೆ ಪ್ರತಿಫಲವಾಗಿ ಉಷೆಯಿಂದಲೂ ಒಂದು ಸುಳ್ಳನ್ನು ಪಡೆದ. ಸುಳ್ಳು ಮಾತನಾಡಬಾರದೆಂದು ಶಾಸ್ತ್ರಗಳೇನೋ ಹೇಳುತ್ತವೆ, ಆದರೆ ಒಂದೊಂದು ಸಂದರ್ಭದಲ್ಲಿ ಸುಳ್ಳಿನಲ್ಲಿಯೇ ಸೊಗಸು ಸಿಕ್ಕುವುದೆಂಬ ಸಂಗತಿ ಆ ಶಾಸ್ತ್ರಕಾರರಿಗೂ ಗೊತ್ತಿರದೆ ಇರಲಿಕ್ಕಿಲ್ಲ. ಸುದರ್ಶನನು ಸತ್ಯಪ್ರಿಯನಾದರೂ ಈಗ ಸುಳ್ಳು ಹೇಳಿದ; ಉಷೆಯ ಸುಳ್ಳನ್ನು ಕೇಳಿ ಸಿಟ್ಟಿಗೇಳದೆ ಎದೆಯಲ್ಲಿಯೆ ಹಿಗ್ಗಿದ.

ಉಷೆಯು ಈಗ ಹೇಳಿದ ಮಾತುಗಳಲ್ಲಿಯ ವಿಚಾರವು, ಹಿಂದೆ ಯಾವಾಗಲೋ ಆಕೆಯ ಮನದಲ್ಲಿ ಮೂಡಿರಬಹುದು; ಆದರೆ ತಾನು

ಬಂದಾಗ ನಡೆಯಿಸಿದ್ದ ಯೋಚನೆಗೆ ಈ ವಿಷಯವೇ ಮೂಲವಾಗಿರಲಾರ ದೆಂದು ಸುದರ್ಶನನ ಸಿದ್ಧಾಂತ. ಈ ಸಿದ್ಧಾಂತಕ್ಕೆ ಕರವಸ್ತ್ರದಲ್ಲಿಯ ಅಕ್ಷರಗಳಿಗೆ ಕೊಟ್ಟಮುತ್ತು ಪ್ರತ್ಯಕ್ಷಪ್ರಮಾಣವಾಗಿದ್ದಿತು. ಆದರೂ ಅದರ ವಿಚಾರವನ್ನು ಹೆಚ್ಚಾಗಿ ಚರ್ಚಿಸುವುದಕ್ಕೆ ಆತನು–ಅದೇತಕ್ಕೋ– ಮನಸ್ಸು ಮಾಡಲಿಲ್ಲ. ಮೇಜಿನ ಇನ್ನೊಂದು ಪಕ್ಕದ ಕುರ್ಚಿಯ ಮೇಲೆ ಕುಳಿತುಕೊಳ್ಳುತ್ತ ಮಾತನಾಡಿದ:

"ಗಿರಿಧರನೂ ಮನೆಯಲ್ಲಿರಲಿಲ್ಲ! ಹೊತ್ತು ಹೋಗದಂತಾಯಿ ತೆಂದು ಇಲ್ಲಿಗೆ ಬಂದೆ. ಶಾರದತ್ತೆ ಎಲ್ಲರನ್ನೂ ಬಿಟ್ಟು ಗಿರಿಧರನೊಬ್ಬ ನಿಗೇ ಊಟಕ್ಕೆ ಹೇಳುವುದಕ್ಕೆ ಕಾರಣವೇನಿರಬಹುದು ಉಷಾ?"

"ನನಗಾದರೂ ಅದು ಹೇಗೆ ತಿಳಿಯಬೇಕು! ಗಿರಿಧರನನ್ನು ತನ್ನ ಅಳಿಯನನ್ನಾಗಿ ಮಾಡಿಕೊಳ್ಳಬೇಕೆಂದು ಶಾರದತ್ತೆಯ ಅಪೇಕ್ಷೆ ಯಿದ್ದುದು ನಿನಗೂ ಗೊತ್ತಿದೆ. ಅಳಿಯನ ಮನಸ್ಸನ್ನು ಮೆಚ್ಚಿಸುವು ದಕ್ಕೆ ಅವನೊಬ್ಬನನ್ನೇ ಕರೆದಿರಬಹುದು. ಯಾಕೆ, ಔತನದೂಟ ನಿನಗೂ ಬೇಕಾಗಿದ್ದಿತೇನು?" ನಗೆಮಾತನಾಡುವುದು ಬೇಡವಾಗಿದ್ದರೂ ಉಷೆಯು ಆಡಿದಳು.

"ಔತನದೂಟ ಸಿಕ್ಕರೆ ಯಾರು ಬೇಡವೆಂದಾರು? ತಡೆ, ಗಿರಿಧರನು ಬರಲಿ; ನಮ್ಮನ್ನು ಬಿಟ್ಟು ಒಬ್ಬನೇ ಹೋದುದಕ್ಕಾಗಿ ಚೆನ್ನಾಗಿ ಮೂದಲಿಸೋಣವಂತೆ!"

"ಬರಿಯ ಮೂದಲಿಸಿದರೆ ಏನಾಯಿತು, ಔತನದೂಟದ ರುಚಿ ಬೇರೆ ಸಿಕ್ಕುವುದಿಲ್ಲವಲ್ಲಾ!"

"ರುಚಿಸಿಕ್ಕದಿದ್ದರೆ ಇಲ್ಲ; ಗಿರಿಧರನೊಡನೆ ಹರಟೆಹೊಡೆಯಲಿಕ್ಕೆ ವಿಷಯ ಸಿಕ್ಕುವುದೋ ಇಲ್ಲವೋ! ಇರಲಿ ಬಿಡು, ಮೂರುಗಂಟೆಯಾಯಿ ತೇನೋ! ಒಂದು ಚದುರಂಗದಾಟವನ್ನಾದರೂ ಆಡೋಣವೇ?"

"ಓಹೋ, ಆಗಬಹುದಲ್ಲವೇ!"

ಉಷೆಯು ಚದುರಂಗದ ಕಾಯಿಗಳನ್ನು ತಂದಳು. ಕಾಯಿ ಗಳನ್ನು ಇಟ್ಟು ಆಟಕ್ಕೆ ಮೊದಲಾಯಿತು; ಆದರೆ ಎಂದೂ ಇಲ್ಲದ ವಿಚಿತ್ರ ವೊಂದು ಇಂದು ನಡೆದಿದ್ದಿತು. ಆಟದ ಕಡೆಗೆ ಇಬ್ಬರಿಗೂ ಲಕ್ಷ್ಯವಿರಲಿಲ್ಲ.

ಸುದರ್ಶನನು ಯೋಚನೆಮಾಡಿ ಕಾಯಿ ಬಿಡುತ್ತಿರುವಾಗ, ಉಷೆಯು ಅವನನ್ನು ಎವೆಯಿಕ್ಕದೆ ನೋಡುತ್ತಿರುವಳು ; ಉಷೆಯು ಯೋಚಿಸುತ್ತ ಕಾಯಿ ನಡೆಯಿಸುತ್ತಿರುವಾಗ, ಸುದರ್ಶನನು ಅವಳನ್ನು ನಿಟ್ಟಿಸಿ ನೋಡುತ್ತಿರುವನು. ಯಾರು ಯಾವ ಕಾಯಿಯನ್ನು ಹೇಗೆ ಹೇಗೆ ನಡೆಯಿಸುತ್ತಿದ್ದಾರೆಂಬುದು ಇಬ್ಬರಿಗೂ ಗೊತ್ತಾಗುತ್ತಿರಲಿಲ್ಲ. ನಡು-ನಡುವೆ ಒಬ್ಬರೊಬ್ಬರ ನೋಟ ಕೂಡಿದಾಗ, ಇಬ್ಬರೂ ಬೆಚ್ಚಿಬಿದ್ದಂತಾಗುತ್ತಿದ್ದರು. ಮುಂಗೆಟ್ಟವರಾಗಿ, ನಾಚಿಕೆಯಿಂದ ತಲೆಬಾಗಿಸಿದರೂ, ಆಟವನ್ನು ನಡೆಯಿಸುವ ವಿಚಾರ ಮಾಡುತಿರುವುದರ ನಟನೆಯನ್ನು ಇಬ್ಬರೂ ತೋರಿಸುವರು. ಬೇಡವಾಗಿ ಆಡುತ್ತಿರುವೆವೆಂಬುದನ್ನು ಇಬ್ಬರೂ ಅರಿತಿದ್ದರಾದರೂ ಆಟವನ್ನು ಬಿಟ್ಟುಬಿಡುವುದಕ್ಕೆ ಒಬ್ಬರಿಗೂ ಇಚ್ಛೆಯಿದ್ದಂತೆ ಕಾಣಲಿಲ್ಲ.

---

## ೧೦ ನೆಯ ಪರಿಚ್ಛೇದ

ನಾಲ್ಕು ಗಂಟೆಯ ಸಮಯವಿರಬಹುದು ; ಗಿರಿಧರನು ಮಧ್ಯಾಹ್ನದಲ್ಲಿ ಬೇಕುಬೇಕಾದಂತಹ ಸೊಗಸಿನೂಟವನ್ನು ಹೊಡೆದು, ಶಾರದತ್ತೆಯ ಮನೆಯ ಉಪ್ಪರಿಗೆಯ ಮೇಲೆ ಮಲಗಿಕೊಂಡವನು, ಈಗ ತಾನೆ ಎದ್ದು ಮುಖತೊಳೆದುಕೊಳ್ಳುತ್ತಿದ್ದ.

ಪ್ರಭೆಯು ಅಂದಿನ ಓಡಾಟಕ್ಕೆ ಅಳತೆಯಿರಲಿಲ್ಲ. ಉಟ್ಟ-ತೊಟ್ಟ ಬಟ್ಟೆಗಳು ಬೆಲೆಬಾಳುವಂತಹವು. ಹೊರಲಾರದಷ್ಟು ತೊಡವುಗಳನ್ನು ಹಾಕಿಕೊಂಡಿರುವಳು. ಆಗಾಗ ಕನ್ನಡಿ ನೋಡಿ ಕುಂಕುಮವನ್ನು ಸರಿಮಾಡಿಕೊಳ್ಳುವಳು ; ಬಾಚಣಿಕೆಯಿಂದ ಕುರುಳುಗಳನ್ನು ನೇವರಿಸಿಕೊಳ್ಳುವಳು; ಸರಿಯಾಗಿದ್ದ ಸೆರಗನ್ನು ಜಗ್ಗಿ ಜಗ್ಗಿ ಹೊದ್ದುಕೊಳ್ಳುವಳು; ನೂಪುರಗಳ ರುಣುಜುಣು ಶಬ್ದವನ್ನು ಮಾಡುತ್ತ, ಆಗಾಗ—ಉಪ್ಪರಿಗೆಯಿಂದ ಕೆಳಮನೆಗೂ ಕೆಳಮನೆಯಿಂದ ಉಪ್ಪರಿಗೆಗೂ—ಓಡಾಡುವಳು. ಎಲ್ಲರೊಡನೆಯೂ ಎಂದೂ ಇಲ್ಲದಷ್ಟು ಗಟ್ಟಿಯಾಗಿ ಮಾತನಾಡಿ ನಗುವಳು.

ಗಿರಿಧರನೊಡನೆ ಮಾತುಮಾತನಾಡುತ್ತಿರುವಾಗಲೆ—ಫಕ್ಕನೆ ಏನೋ ನೆನಪಾದಂತಾಗಿ—ನಾಚಿಕೆಯ ನಗೆಯಿಂದ ತಲೆಯನ್ನು ಬಾಗಿಸುವಳು. ಗಿರಿಧರನು ಇನ್ನಾರೊಡನೆಯಾದರೂ ಮಾತನಾಡುತ್ತಿದ್ದರೆ, ಕುತೂಹಲವು ತುಂಬಿದ ಸ್ಥಿರದೃಷ್ಟಿಯಿಂದ ಆತನನ್ನೇ ನೋಡುತ್ತಿರುವಳು.

ಗಿರಿಧರನು ಮಲಗಿ ನಿದ್ದೆ ಮಾಡುತ್ತಿರುವಾಗ—ಏಳೆಂಟು ಸಲವಾದರೂ—ಪ್ರಭಾ ಅಲ್ಲಿಗೆ ಮೆಲ್ಲಗೆ ಬಂದು ಬಂದು ನಿಂತು, ಕೆಲವು ನಿಮಿಷ ಅವನನ್ನು ಅರಳುಗಣ್ಣಿನಿಂದ ನೋಡಿ ಹೋಗಿರಬಹುದು. ಈಗ ಮತ್ತೊಮ್ಮೆ ಬಂದು ಗಿರಿಧರನು ಮುಖತೊಳೆದುಕೊಳ್ಳುತ್ತಿರುವುದನ್ನು ನೋಡಿದಳು; ಗಡಬಿಡಿಯಿಂದ—ನಡುಗುದನಿಯಲ್ಲಿ—ಅಟ್ಟದ ಮೇಲಿಂದಲೇ ಕೂಗಿ ಹೇಳಿದಳು.

" ಅಮ್ಮಾ, ಗಿರಿಧರ ಎದ್ದಿದ್ದಾನೆ ! "

" ಏತಕ್ಕಮ್ಮಾ ಪ್ರಭಾ ? " ಗಿರಿಧರನು ಕೇಳಿದ.

" ಏನೋ, ಅಮ್ಮ ' ನೋಡಿಕೊಂಡು ಬಾ '–ಎಂದು ಹೇಳಿದಳು."

ಗಿರಿಧರನು ಆರಾಮುಕುರ್ಚಿಯೊಂದರ ಮೇಲೆ ಕುಳಿತುಕೊಳ್ಳುತ್ತಿರುವಾಗಲೇ ಕೇಳಿದ :

" ನಿಮ್ಮ ತಂದೆ ಆಫೀಸಿನಿಂದ ಬರಲಿಲ್ಲವೇ ಇನ್ನೂ ? "

" ಇನ್ನೂ ಈಗ ನಾಲ್ಕುಗಂಟೆ; ಐದೂವರೆಗಲ್ಲವೇ ಅವರು ಮನೆಗೆ ಬರುವುದು ? "

" ಈಗ ಉಷೆಯು ಇಲ್ಲಿದ್ದರೆ ಚೆನ್ನಾಗುತ್ತಿದ್ದಿತು ನೋಡು. ಕೊಂಚಕಾಲ ಹಾಯಾಗಿ ಸಂಗೀತವನ್ನು ಕೇಳಬಹುದಾಗಿದ್ದಿತು. ಅವಳಿಗೇತಕ್ಕೆ ಹೇಳಲಿಲ್ಲ ಊಟಕ್ಕೆ–ಪ್ರಭಾ? "

" ಏನೋ ! ಅಮ್ಮ ನಿನ್ನೊಬ್ಬನನ್ನೆ ಬರುವುದಕ್ಕೆ ಹೇಳಿದಳು. ನಾನೂ ಈಗ ಚೆನ್ನಾಗಿ ಸಂಗೀತ ಕಲಿಯಬೇಕೆಂದಿದ್ದೇನೆ. ನಾಲ್ಕಾರು ದಿನದಳಿಂದ ಸಂಗೀತಶಾಸ್ತ್ರಿಗಳು, ಬೆಳಗಿನಲ್ಲಿ ನಮ್ಮ ಮನೆಗೆ ಬಂದು ಪಾಠ ಹೇಳಿಕೊಟ್ಟು ಹೋಗುತ್ತಿದ್ದಾರೆ. "

" ಹೀಗೇನು ? ಚೆನ್ನಾಯಿತು ಬಿಡು ! ಮನಸ್ಸಿಟ್ಟು ಕಲಿತರೆ ನೀನೂ ಉಷೆಯಂತೆ ಹಾಡಬಹುದು. "

" ಅದಕ್ಕೆಂತಲೇ ನಾನೂ ಪ್ರಾರಂಭಿಸಿದ್ದೇನೆ. . ಕಲಿಯಲಿಕ್ಕೆ. ಗಿರಿಧರ! ನೀನು ಇನ್ನೊಮ್ಮೆ ಮುಂಬಯಿಯಿಂದ ಬರುವಾಗ, ನನಗೊಂದು ಅಂತಹದೇ ಕರವಸ್ತ್ರ ತಂದುಕೊಡುತ್ತೀಯಾ? ಅದರ ಮೇಲೆ ನಿನ್ನ ಹೆಸರಿನ ಕಸೀದೆ ತೆಗೆಯುತ್ತೇನೆ."

ಪ್ರಭೆಯ ಮಾತು ಮುಗಿಯುತ್ತಿರುವಾಗಲೆ, ಅಡಿಗೆಯಾಕೆ ಕಾಫಿ-ತಿಂಡಿಯ ತಟ್ಟೆಯನ್ನು ತೆಗೆದುಕೊಂಡು ಮೇಲೆ ಬಂದಳು. ಆಕೆಯನ್ನು ಅನುಸರಿಸಿಯೇ ಶಾರದಮ್ಮನೂ ಬಂದರು. ಅಡಿಗೆಯಾಕೆ ತಟ್ಟೆಯನ್ನು ಒಂದು ಮೇಜಿನ ಮೇಲಿಟ್ಟು ಹೊರಟುಹೋದಳು. ಶಾರದಮ್ಮನವರು ಗಿರಿಧರನ ಬಳಿಯಲ್ಲಿಯ ಕುರ್ಚಿಯೊಂದರ ಮೇಲೆ ಕುಳಿತುಕೊಂಡು ಕೇಳಿದರು :

" ಏನು ಗಿರಿಧರ, ನಿದ್ದೆ ಚೆನ್ನಾಗಿ ಆಯಿತೇನಪ್ಪಾ? "

" ಆಗದೆ ಏನಮ್ಮಾ, ಊಟ ತುಂಬ ಭಾರವಾಗಿದ್ದಿತು. "

" ಈಗ ಭಾರ ಕೊಂಚ ಕಡಿಮೆಯಾಗಿದೆಯೋ, ಇಲ್ಲವೋ ? "

" ಕೊಂಚವೇಕೆ? ಇನ್ನೂ ಅಷ್ಟು ಉಣ್ಣುವಂತೆ ಇದ್ದೇನೆ ನಾನೀಗ ! "

" ಸರಿಯೆ ! ನೀನು ಅಪ್ಪಣ್ಣನ ಮಗನಲ್ಲವೆ? ಪ್ರಭಾ, ಗಿರಿಧರನಿಗೆ ಕಾಫಿಯನ್ನು ಕೊಡಮ್ಮಾ ! " ಪ್ರಭೆಯ ಕಡೆಗೆ ಹೊರಳಿ ಶಾರದಮ್ಮ ಹೇಳಿದರು.

ಪ್ರಭಾ ಎದ್ದು, ತಟ್ಟೆಯಲ್ಲಿಟ್ಟಿದ್ದ—ತಿಂಡಿಯನ್ನು ತುಂಬಿದ ಬೆಳ್ಳಿಯ ಚಿಕ್ಕಚಿಕ್ಕ ಮೂರು ತಟ್ಟೆಗಳನ್ನು ತಂದು, ಗಿರಿಧರನ ಮುಂಗಡೆಯ ಚಿಕ್ಕ ಟೇಬಲ್ಲಿನ ಮೇಲೆ ಇಟ್ಟಳು. ಒಂದು ಗಿರಿಧರನಿಗೆ, ಇನ್ನೊಂದು ತಾಯಿಗೆ, ಮತ್ತೊಂದು ತನಗೆ.

ಅಪ್ಪಣರಾಯರು ಅಳಿಯತನಕ್ಕೆಂದು ಮಾವನ ಮನೆಗೆ ಹೋದಾಗ, ಹದಿನಾರು ಮಂಡಿಗೆಗಳನ್ನು ತಿಂದ ಹಿಂದಿನ ಕಥೆಯನ್ನು, ಶಾರದಮ್ಮ ಗಿರಿಧರನಿಗೆ ಹೇಳುತ್ತಿದ್ದರು; ನಗೆಮೊಗದವನಾಗಿ ಗಿರಿಧರನು ತಿಂಡಿಯನ್ನು ಬಾಯಲ್ಲಿಟ್ಟುಕೊಳ್ಳುತ್ತ ಕೇಳುತ್ತಿದ್ದನು.

ಪ್ರಭೆಯು ಕಿಟಲಿಯಲ್ಲಿಯ ಕಾಫಿಯನ್ನು ಕಪ್ಪುಗಳಿಗೆ ಹಾಕುತ್ತಿದ್ದಳು. ಕಣ್ಣುಗಳೆರಡೂ ಗಿರಿಧರನ ಕಡೆಗೆ ; ಕಪ್ಪು ತುಂಬಿದ ಕಾಫಿಯು ಚೆಲ್ಲಿ ಹೋಗುತ್ತಿರುವುದರ ಕಡೆಗೆ ಪ್ರಭೆಯ ಲಕ್ಷ್ಯವೇ ಇಲ್ಲ. ಮೇಜಿನ ಮೇಲೆ ಬಿದ್ದ ಕಾಫಿಯು ಹರಿದು ಬಂದು, ಮೇಜಿಗೆ ಹೊಂದಿ ನಿಂತ ಭಾಗದ ಸೀರೆ ನನೆದು, ಮೈಗೆ ಬಿಸಿ ತಾಗಿದೊಡನೆಯೆ ಪ್ರಭೆಯು ನೋಡುತ್ತಾಳೆ, ಮೇಜಿನ ಮೇಲೆಲ್ಲ ಕಾಫಿಯಾಗಿಬಿಟ್ಟಿದೆ. ತಟ್ಟೆಯನ್ನು ಮುಚ್ಚಿತಂದ ಬೆಳ್ಳನೆಯ ಬಟ್ಟೆಯಿಂದ–ಗಿರಿಧರನ ಕಣ್ಣಿಗೆ ಕಾಣದಂತೆ, ಮೇಜಿನ ಮೇಲಿನ ಕಾಫಿಯನ್ನೆಲ್ಲ ಮೆಲ್ಲಗೆ ಒರಸಿ ತೆಗೆದಳು. ನನೆದ ಸೀರೆಯ ಭಾಗವು ಕಾಣದಂತೆ ಸೆರಗಿನಲ್ಲಿ ಮುಚ್ಚಿಕೊಂಡಳು. ಬಳಿಕ ಎಚ್ಚರದಿಂದ ಮೂರು ಕಪ್ಪುಗಳನ್ನೂ ತುಂಬಿ, ಒಂದೊಂದರಂತೆಯೆ ಚಿಕ್ಕ ಮೇಜಿನ ಮೇಲೆ ತಂದಿಟ್ಟಳು ; ತಾನೂ ಪಕ್ಕದ ಕುರ್ಚಿಯ ಮೇಲೆ ಕುಳಿತುಕೊಂಡಳು. ಅಷ್ಟರಲ್ಲಿಯೆ ಶಾರದಮ್ಮನ ಮುಂಡಿಗೆಯ ಇತಿಹಾಸವು ಮುಗಿದಿದ್ದಿತು.

ಕೈಯಲ್ಲಿ ತುತ್ತೊಂದನ್ನು ಹಿಡಿದು ಗಿರಿಧರನು ಕೇಳಿದ :

"ಅತ್ತೆಮ್ಮಾ, ರಾಮೂ ಬರಲೇ ಇಲ್ಲವಲ್ಲ ! ಈ ಸಲ ಬರುತ್ತಾನೋ ಇಲ್ಲವೊ ?"

"ಬಂಗಾರದಂತಹ ಆ ಬೆಂಗಳೂರು ಪಟ್ಟಣವನ್ನು ಬಿಟ್ಟು, ಈ ದರಿದ್ರ ಬೆಳಗಾಂವಿಗೆ ಯಾತಕ್ಕೆ ಬಂದಾನಪ್ಪಾ ಅತ. ಆದರೂ ತಂಗಿಯ ಲಗ್ನಕ್ಕೆ ಬಾರದೆ ನಿಲ್ಲುತ್ತಾನೆಯೆ ?"

"ಹಾಗಾದರೆ ಪ್ರಭೆಯ ಲಗ್ನವೇನು ಈ ಸಲ ? ಸರಿ ! ಹೋಳಿಗೆಯಿದೆಯೆನ್ನಿರಿ ! ಮನೆ ಎಲ್ಲಿ ನೋಡಿದ್ದೀರಿ ?"

ಪ್ರಭೆಯ ಮುಖವು ಲಜ್ಜಾವನತವಾಯಿತು. ಕೈಯಲ್ಲಿ ಹಿಡಿದ ಕಾಫಿಯ ಬಟ್ಟಲು ಕಂಪಿಸತೊಡಗಿತು. ಆಶೆ ತುಂಬಿದ ಓರೆನೋಟವನ್ನು ಗಿರಿಧರನ ಕಡೆಗೊಮ್ಮೆ ತಾಯಿಯ ಕಡೆಗೊಮ್ಮೆ ಬೀರಿ, ಮತ್ತೆ ಅವಳು ತಲೆಬಾಗಿಸಿ ಕುಳಿತುಕೊಂಡಳು. ಅರೆನಗೆಯನ್ನು ಹೊರಕ್ಕೆ ತೋರಿಸಬೇಕೆಂದಿರುವ ಕೆಳದುಟಿಯನ್ನು ಮೇಲಿನ ಹಲ್ಲುಗಳು ಕಚ್ಚಿಹಿಡಿದಿದ್ದುವು. ಗಿರಿಧರನ ಮಾತಿಗೆ ಶಾರದಮ್ಮ ಮರುಮಾತು ಕೊಟ್ಟರು :

" ಬೇರೆಯ ಮನೆ ಏತಕ್ಕೆ ನೋಡಬೇಕು ? ನೀನಿಲ್ಲವೇ ? ನಾನು ಅಪ್ಪಣ್ಣನೆದುರಿಗೆ ಹೇಳಿದ್ದೇನೆ; ಆತನು ಸಂತೋಷದಿಂದ ಒಪ್ಪಿಕೊಂಡಿದ್ದಾನೆ. ಇನ್ನು ನಿನ್ನ ಸಮ್ಮತಿಯೊಂದು ಸಿಕ್ಕರೆ ನಿಶ್ಚಯದ ಸಿದ್ಧತೆಯೆ ! "

ಗಿರಿಧರನು ಮುಖ ಮುದುಡಿಸಿದುದು ಶಾರದಮ್ಮನ ಕಣ್ಣಿಗೆ ಬಿದ್ದಿತೋ ಇಲ್ಲವೋ ! ತಲೆತಗ್ಗಿಸಿ ಕುಳಿತ ಪ್ರಭೆಯಂತೂ ಅದನ್ನು ನೋಡಲಿಲ್ಲ. ಗಿರಿಧರನು ದಾಕ್ಷಿಣ್ಯದ ಸ್ವರದಲ್ಲಿ ಹೇಳಿದನು :

" ನನ್ನ ಸಮ್ಮತಿಯೇ !. . ನನ್ನ ಯೋಚನೆಯೇನೋ. . ಸದ್ಯಕ್ಕೆ ಲಗ್ನ ಮಾಡಿಕೊಳ್ಳಬಾರದೆಂದು ಇರುತ್ತದೆ. "

" ಸಾಕಪ್ಪಾ! ಇನ್ನೂ ಎಷ್ಟು ದಿವಸ ಬಿಡಬೇಕೆನ್ನುತ್ತಿ? ನಿನ್ನ ಓರಗೆಯವರು ಎರಡೆರಡು ಮಕ್ಕಳ ತಂದೆಯಾಗಿದ್ದಾರೆ. ಯಾಕೆ, ಪ್ರಭಾ ನಿನಗೆ ಚೆನ್ನಾಗಿ ತೋರುವುದಿಲ್ಲವೋ ? "

ಗಿರಿಧರನು ಮುಖವೆತ್ತಿ ಪ್ರಭೆಯ ಕಡೆಗೆ ನೋಡಿ ಹೇಳಿದ :

" ಯಾಕೆ ಅವಳಿಗೇನಾಗಿದೆ? ಚೆನ್ನಾಗಿದ್ದವರು ಚೆನ್ನಾಗಿ ತೋರುವುದಿಲ್ಲವೇ ? "

" ಹಾಗಿದ್ದರೆ ಈಗಲೆ ನಿನ್ನ ಸಮ್ಮತಿಯನ್ನೇಕೆ ಕೊಡಕೂಡದು ? "

" ಆಗಲಿ ಅತ್ತೆಮ್ಮಾ ! ವಿಚಾರಮಾಡಿ ನಿನಗೆ ಏನೆಂಬುದನ್ನು ತಿಳಿಸುತ್ತೇನೆ. ಮನೆಯಲ್ಲಿ ತಾಯಿಯೊಡನೆ-ತಂದೆಯೊಡನೆ ಮಾತನಾಡಿ ನೋಡಿಕೊಳ್ಳುತ್ತೇನೆ. "

" ನಿಮ್ಮ ತಂದೆಯಂತೂ ಎಷ್ಟೋ ಸಲ ಒಪ್ಪಿಕೊಂಡಿದ್ದಾನಪ್ಪಾ! "

" ಒಳ್ಳೆಯದೇ ಆಯಿತಲ್ಲ ! "

ಶಾರದಮ್ಮ ಮಾತನ್ನು ಮುಂದುವರಿಸಿದರು :

" ನಿನ್ನ ಮದುವೆಯೊಡನೆ ಉಷೆಯ ಲಗ್ನವನ್ನೂ ತೀರಿಸಿಬಿಡಬೇಕೆಂದಿದ್ದಾನೇನೋ ನಿಮ್ಮ ತಂದೆ ! "

ಗಿರಿಧರನು ಬೆಚ್ಚಿಬಿದ್ದವನಾಗಿ, ಕುಡಿಯಲಿಕ್ಕೆಂದು ಎತ್ತಿದ್ದ ಕಾಫಿಯನ್ನು ಹಾಗೆಯೇ ಕೆಳಕ್ಕಿಟ್ಟು ಕೇಳಿದ :

" ಉಷೆಯ ಲಗ್ನ ! ಯಾರೊಡನೆ ? "

" ಯಾರೊಡನೆಯೋ ? ಗೊತ್ತಿಲ್ಲದವರಂತೆಯೇ ಕೇಳುತ್ತಿದ್ದೀ ಯಲ್ಲವೋ ಗಿರಿಧರಾ ? "

" ಗೊತ್ತಿಲ್ಲ ಅತ್ತೆಮ್ಮಾ, ಖಂಡಿತವಾಗಿಯೂ ಗೊತ್ತಿಲ್ಲ ನನಗೆ. ಉಷೆಯ ಲಗ್ನ ಯಾರೊಡನೆಯೆಂದು ನಿನಗೆ ಗೊತ್ತಾಗಿದೆ ? "

" ಮತ್ತೆ ಯಾರು ? ಕತ್ತೆ ತಪ್ಪಿದರೆ ಹಾಳುಗೋಡೆಯೆ ಗತಿ ! ಪರದೇಶಿ-ಪರದೇಶಿಗಳಿಗೆ ಗಂಟು. ಸುದರ್ಶನ ಮನೆಯಲ್ಲಿಯೇ ಇದ್ದಾನಲ್ಲವೆ, ಬೇರೆಯವರನ್ನು ಏತಕ್ಕಾಗಿ ಹುಡುಕಬೇಕು ? "

ಬೆರಗಿನ ಸ್ವರದಲ್ಲಿ—ಒಣಗಿದ ಕಂಠದಿಂದ ಗಿರಿಧರನು ಕೇಳಿದ :

" ನಿನಗೆ ಯಾರು ಹೇಳಿದರಮ್ಮಾ ಈ ಸಂಗತಿಯನ್ನು ? "

" ನಮ್ಮ ಸಂಗೀತಶಾಸ್ತ್ರಿಗಳ ಹೆಂಡತಿ—ಸರಸಕ್ಕ ಹೇಳುತ್ತಿದ್ದಳಪ್ಪಾ. ಶಾಸ್ತ್ರಿಗಳೇನೋ ಆಕೆಯೆದುರು, ಹೀಗೆಯೇನೋ ಹೇಳಿದರಂತೆ. ಉಷಾ-ಸುದರ್ಶನರು ಒಬ್ಬರನ್ನೊಬ್ಬರು ಮೊದಲಿನಿಂದಲೂ ತುಂಬಾ ಪ್ರೀತಿಸುತ್ತಿದ್ದಾರಂತೆ. ಇಬ್ಬರಿಗೂ ಲಗ್ನವಾದರೆ ಒಳ್ಳೆಯದಾಗುವುದೆಂದೂ ಶಾಸ್ತ್ರಿಗಳು ಮನೆಯಲ್ಲಿ ಮಾತನಾಡುತ್ತಿದ್ದರಂತೆ. ಸುದರ್ಶನನಿಗೂ ಶಾಸ್ತ್ರಿಗಳಿಗೂ ಬಹಳ. ಅವನೇ ಏನಾದರೂ ಶಾಸ್ತ್ರಿಗಳ ಮುಂದೆ ಹೇಳಿದ್ದಾನು! "

ವಿಷಾದದಿಂದ ಜಡವಾದ ದನಿಯಲ್ಲಿ ಗಿರಿಧರನು ಹೇಳಿದ :

" ನನಗೇನೂ ಈ ಮಾತು ತಿಳಿಯದಮ್ಮಾ ! "

" ನಿನಗೆ ಹೇಗೆ ತಿಳಿಯಬೇಕು ! ನಿಮ್ಮ ತಾಯಿ, ಬುದ್ಧಿವಂತ, ಬುದ್ಧಿವಂತ-ಎಂದು, ಏನೆಲ್ಲವನ್ನೂ ಸುದರ್ಶನನ ಅಭಿಪ್ರಾಯ ಕೇಳದೆ ಮಾಡುವುದಿಲ್ಲ. ಮನೆಯ ಮಾತೆಲ್ಲ ಅವನಿಗೆ ಗೊತ್ತು ; ನಿನಗೇನು ಗೊತ್ತು ? "

ಗಿರಿಧರನು ಮಾತನ್ನೇನೂ ಆಡದೆ, ರುಚಿ—ಅರುಚಿಗಳನ್ನು ಅರಿಯದೆ ಕಾಫಿಯನ್ನು ಕುಡಿದ. ಗಡಿಯಾರವು ಐದುಗಂಟೆಗಳನ್ನು ಬಾರಿಸಿತು. ಕೈತೊಳೆದುಕೊಂಡು ಗಿರಿಧರನು ಶಾರದಮ್ಮನಿಗೆ ಹೇಳಿದ :

"ಅತ್ತೆಮ್ಮಾ, ನಾನಿಂದು ಸಿನೆಮಾಕ್ಕೆ ಹೋಗಬೇಕಾಗಿದೆ ; ಮಾವ ಬಂದೊಡನೆಯೆ ಹೇಳು; ನಾನೀಗ ಹೊರಡುತ್ತೇನೆ. "

" ಸಿನೆಮಾಕ್ಕೆ ಹೋಗಬೇಕೆ? ಪ್ರಭಾ ಕೂಡ ಹೋಗಬೇಕೆನ್ನು-ತ್ತಿದ್ದಳು ; ಅವಳನ್ನೂ ಜೊತೆಗೆ ಕರೆದುಕೊಂಡು ಹೋದರಾಗದೆ ? " ಶಾರದಮ್ಮನು ನುಡಿದರು.

ಗೊಂದಲದಲ್ಲಿ ಬಿದ್ದವನಂತೆ ಗಿರಿಧರ ಒಂದರ್ಧ ನಿಮಿಷ ಸುಮ್ಮನೆ ಕುಳಿತಿದ್ದು, ಬಳಿಕ ಒಮ್ಮೆಲೆ ಹೇಳಿದನು :

" ಇಂದು ಬೇಡ, ಬೇರೆಯ ಕೆಲಸಗಳಿವೆ. ಇನ್ನೆಂದಾದರೂ ಪ್ರಭೆ ಬರಲಿ ! "

ಪ್ರಭೆಗೂ ಅಸಮಾಧಾನ, ಶಾರದಮ್ಮನವರಿಗೂ ಅಸಮಾಧಾನ. ಇಬ್ಬರ ಮುಖಗಳೂ ಒಮ್ಮೆಲೆ ಇಳಿದುಹೋದುವು.

ಬಟ್ಟೆಗಳನ್ನು ಹಾಕಿಕೊಂಡು ಗಿರಿಧರನು ಸಿದ್ಧನಾದ. ಪ್ರಭೆಯು ತನ್ನ ಜಡವಾದ ಕೈಯಿಂದೆತ್ತಿ ಕೊಟ್ಟ ತಾಂಬೂಲವನ್ನು ಬಾಯಲ್ಲಿ ಇಟ್ಟುಕೊಳುತಿರುವಾಗಲೆ ಹೊರಟುಬಿಟ್ಟ.

" ಬೇಗನೆ ಯೋಚನೆಮಾಡಿ ನಿನ್ನ ಸಮ್ಮತಿಯನ್ನು ತಿಳಿಸಪ್ಪಾ—ಗಿರಿಧರಾ! " ಎಂದು ಉಪ್ಪರಿಗೆಯ ಮೆಟ್ಟಿಲನ್ನು ಇಳಿಯುತ್ತಿರುವಾಗ ಶಾರದಮ್ಮನವರು ತಗ್ಗಿದ ಧ್ವನಿಯಲ್ಲಿ ಹೇಳಿದುದು, ಆತನ ಮನಸ್ಸನ್ನು ಮುಟ್ಟಿತೋ ಇಲ್ಲವೋ ಹೇಳಲಾರೆವು. ಕಿವಿಯಲ್ಲಿ ಗಾಳಿ ಹೊಕ್ಕವರಂತೆ ಯಾವುದನ್ನೂ ಲೆಕ್ಕಿಸದೆ, ಗಿರಿಧರನು ಹೊರಟವನು ಹೊರಟೇ ಬಿಟ್ಟ.

---

## ೧೧ನೆಯ ಪರಿಚ್ಛೇದ

ಶಾರದತ್ತೆಯ ಮನೆಯಿಂದ ಹೊರಟ ಗಿರಿಧರನು ಎಲ್ಲಿಗೂ ಹೋಗದೆ ನೇರವಾಗಿ ಮನೆಗೆ ಬಂದನು. ಯಾರೊಡನೆಯೂ ಮಾತನ್ನಾಡದೆ ಉಪ್ಪರಿಗೆಯನ್ನೇರಿ ಮೇಲಕ್ಕೆ ಹೋದನು. ಗಿರಿಧರನು ಬಂದಾಗ ಸುದರ್ಶನನು ಮನೆಯಲ್ಲಿರಲಿಲ್ಲ ; ಉಷೆಯು ಯಶೋದಮ್ಮನೊಡನೆ ದೇವಾಲಯಕ್ಕೆ ಹೋಗಿದ್ದಳು.

ಗಿರಿಧರನು ಉಪ್ಪರಿಗೆಯ ಮೇಲಿನ ತನ್ನ ಮಲಗುವ ಕಿರುಮನೆಗೆ ಹೋದನು. ಬಟ್ಟೆಯನ್ನು ಬಿಚ್ಚಿ ಇಟ್ಟು, ಆರಾಮುಕುರ್ಚಿಯೊಂದರ ಮೇಲೆ ಬಿದ್ದುಕೊಂಡನು. ಎರಡೂ ಹಸ್ತಗಳನ್ನು—ಒಂದರಲ್ಲೊಂದು

ಬೆರಳುಗಳನ್ನು ಸೇರಿಸಿ—ಮುಂದಲೆಯ ಮೇಲೆ ಇಟ್ಟುಕೊಂಡನು. ಕಣ್ಣುಗಳು ತೆರೆದುಕೊಂಡಿದ್ದರೂ ಆತನು ಹೊರಗಿರುವ ಯಾವ ಪದಾರ್ಥಗಳನ್ನೂ-ಆಗ ಕಂಡು ಗುರುತಿಸದವನಾದನು. ಉಸಿರು ಒಂದೊಂದು ಸಲ ನಿಧಾನವಾಗಿ ಆಡುವುದು; ಇನ್ನೂ ಒಂದೊಂದು ಸಲ ಉದ್ವೇಗಗೊಂಡವರಂತೆ ಮುಸುಮುಸುಗುಡುವುದು. ಆಗ ಗಿರಿಧರನು ಇಂದಿನವರೆಗಿನ ಉಷಾ-ಸುದರ್ಶನರ ಪ್ರತಿಯೊಂದು ವ್ಯವಹಾರವನ್ನೂ ಅಳೆದು ಬಳಚುತ್ತಿದ್ದನು.

'' ಸುದರ್ಶನ-ಉಷೆಯರಲ್ಲಿ ಹೀಗೆಲ್ಲ ಪ್ರಣಯಸಂಧಾನವು ನಡೆದಿದೆಯೆಂಬುದು ಇದುವರೆಗೆ ನನ್ನ ಮಂಕುಬುದ್ಧಿಗೆ ಹೊಳೆದಿರಲಿಲ್ಲ. ಕಳೆದ ಕ್ರಿಸ್‌ಮಸ್ ಬಿಡುವಿನಲ್ಲಿ ಬಂದಾಗಲೆ ಅವರಿಬ್ಬರಲ್ಲಿಯೂ ಮಾತು-ಕಥೆ, ಆಟ-ಪಾಟಗಳು ಅದೆಷ್ಟೋ ನಡೆಯುತ್ತಿದ್ದುವು. ಅದೆಲ್ಲವೂ ಒಂದೇ ಮನೆಯಲ್ಲಿ ಕೂಡಿ ಬಳೆದ ಸಲುಗೆಯ ವ್ಯವಹಾರವೆಂದು ಭಾವಿಸಿದೆ. ಸುದರ್ಶನನು ನನ್ನವನೆಂದು ಪೂರ್ಣವಾಗಿ ನಂಬಿದುದೂ ಹಾಗೆ ಭಾವಿಸುವುದಕ್ಕೆ ಕಾರಣವಾಗಿದ್ದಿತು. ಆದರೆ ಈ ಸಲ, ಉಷಾ-ಸುದರ್ಶನರ ವಿಶೇಷಸಂಬಂಧದ ಗುರುತುಗಳು ಆಗಾಗ ನನ್ನ ಅಭಿಮಾನವನ್ನು ಅಳುಕಿಸಿದರೂ, ಏತಕ್ಕಾಗಿಯೊ ಅದನ್ನು ಕಡೆಗಣಿಸಿಬಿಟ್ಟೆ. ಊರಿಂದ ಬಂದೊಡನೆಯೆ ಉಷೆಯ ಮೊದಲನೆಯ ಮಾತು ಸುದರ್ಶನನ ಕೂಡ. ಹೆಚ್ಚಿನ ಮಾತು-ನಗೆಗಳು ಸುದರ್ಶನನೊಡನೆ. ಆಟಪಾಟ ಸುದರ್ಶನನ ಜೊತೆಯಲ್ಲಿ. ಓದುವ ಬರೆಯುವ ನೆಪದಿಂದ ಯಾವಾಗಲೂ ಸುದರ್ಶನನ ಜೊತೆಯ ಸಂಬಂಧ. ಮೆಚ್ಚಿನೊಡವೆಯೆಂದು ಕರವಸ್ತ್ರವನ್ನು ತಂದು-ಕೊಟ್ಟರೆ, ಕೃತಜ್ಞತೆಯ ಒಂದೇ ಒಂದು ದೃಷ್ಟಿಕೂಡ ನನಗೆ ದೊರೆಯಲಿಲ್ಲ. ಸಂಗೀತ ಹೇಳುವಾಗಲೂ ಪಕ್ಷಪಾತವೇ; ಮೊದಲು ಸುದರ್ಶನನಿಗೆ ಬೇಕಾದ ರಾಗಾಲಾಪನೆ. ಕನಸಿನಲ್ಲಿ ಕೂಡ ಪ್ರೀತಿಯಿಂದ–ಆತ್ಮೀಯ ಭಾವದಿಂದ–ಕೂಗುವುದು ಸುದರ್ಶನನ ಹೆಸರನ್ನು. ಇನ್ನು ಸುದರ್ಶನ! ನನ್ನ ಕೂಡ ಒಂದುದಿನವೂ ಆಡದಷ್ಟು ಮಾತುಗಳನ್ನು ಉಷೆಯೊಡನೆ ಯಾವಾಗಲೂ ಆಡುತ್ತಾನೆ. ಆಕೆ ಬಲವಂತ ಪಡಿಸಿದರೆ ಪ್ರತಿಜ್ಞೆಯನ್ನು ಮುರಿದೂ ಕಾಫಿಯನ್ನು ಕುಡಿದ. ಉಷೆಯೇನು ಚಿಕ್ಕವಳೇ? ಹದಿನೆಂಟು

ಹತ್ತೊಂಬತ್ತು ವರುಷದ ತರುಣಿ. ರೂಪ-ಗುಣ ಸಂಪನ್ನಳು. ಅಂತಹ ಆಕೆ ನಿದ್ದೆ ಮಾಡುತ್ತಿರುವಾಗ, ಆಕೆಯು ಕಿರುಮನೆಯಲ್ಲಿ ಇರುವುದಕ್ಕೇನು ಕಾರಣ ? ಕನವರಿಸಿ ಕೂಗಿಕೊಂಡಾಗ, ತೀರ ಬಳಿಯಲ್ಲಿ ಕುಳಿತು ಮೈಯ ಮೇಲೆಯೆಲ್ಲ ಕೈಯಾಡಿಸುತ್ತಿರುವುದನ್ನು ನಾನೇ–ಇದೇ ಕಣ್ಣುಗಳಿಂದ ನೋಡಿದ್ದೇನೆ.ನನ್ನಲ್ಲಿಯ ಯಾವುದೋ ಒಂದು ಅಸಮರ್ಥತೆಯ ಎಳೆತವು, ಇವೆಲ್ಲವುಗಳ ಕಡೆಗೂ ದುರ್ಲಕ್ಷ್ಯಭಾವದಿಂದ ನೋಡಲಿಕ್ಕೆ ಹಚ್ಚುತ್ತಿದ್ದಿತಾದರೂ, ತೀರ ಒಳಗಿನದೊಂದು – ತೀರ ಸಣ್ಣಗಿನ – ಮನಸ್ಸಿನೆಳೆಯು ಏನೇನೋ ಹಾರಾಟವನ್ನು ನಡೆಯಿಸುತ್ತಿದ್ದಿತು. ಸಂಗೀತಶಾಸ್ತ್ರಿಯ ಮುಂದೆ ಸುದರ್ಶನನು ತಾನಾಗಿಯೇ ತನ್ನ ಪ್ರಣಯದ ಕತೆಯನ್ನು ಹೇಳಿರಬಹುದಲ್ಲವೇ? ಉಷೆಯನ್ನು ನಾನು ಅಪೇಕ್ಷಿಸುತ್ತಿದ್ದ ವಿಚಾರವು ಅಮ್ಮನಿಗೆ ಗೊತ್ತಿದ್ದರೂ, ಆಕೆ ಉಷಾ-ಸುದರ್ಶನರ ಮದುವೆಗೆ ಸಮ್ಮತಿ ಕೊಟ್ಟಳೇ ?''

ಈ ಎಲ್ಲ ವಿಚಾರಗಳೂ ತಲೆ-ಬಾಲಗಳನ್ನು ಕಟ್ಟಿಕೊಂಡು, ಭೀಕರವಾದ ಬಣ್ಣವನ್ನು ಬಳಿದುಕೊಂಡು, ಗಿರಿಧರನ ಮನದ ಕಣ್ಣೆದುರಿನ ಅನಂತವಾದ ಬಯಲಲ್ಲಿ ನಾಟಕವನ್ನು ಮಾಡುತ್ತಿದ್ದುವು. ಆತನಿಗೆ ಸುದರ್ಶನನ ವಿಷಯದಲ್ಲಿ ರೋಷ-ತಿರಸ್ಕಾರಗಳು ಹೆಚ್ಚಿದುವು; ಅದರ ಆವೇಶದಲ್ಲಿಯೆ ಕೂಗಿ ನುಡಿದುಬಿಟ್ಟ :

'' ಸುದರ್ಶನ! ನಾನು ನಿನ್ನನ್ನು ನನ್ನವನೆಂದು ನಂಬಿದ್ದೆ ; ನಂಬಿದವನನ್ನು ನೀನು ನೀರಲ್ಲಿ ಮುಳುಗಿಸಿದೆ. ಪಾಪೀ ! ಉಷೆಯಂತಹ ರತ್ನ ನಿನ್ನಂತಹ ಬಡಪಾಯಿಗೆ ಸಲ್ಲುವುದೇ..?''

" ಇದೇನೋ ಗಿರಿಧರ ! '' ಎಂದು ಕೇಳುತ್ತ ಹಠಾತ್ತಾಗಿ ಸುದರ್ಶನನು ಅಲ್ಲಿಗೆ ಬಂದುಬಿಟ್ಟ. ಮೊದಲಿನ ಆವೇಶದಲ್ಲಿಯೇ ಗಿರಿಧರನು ತನ್ನ ಕೆಂಪಡರಿದ ಕಣ್ಣ ನೋಟವನ್ನು ಸುದರ್ಶನನ ಮೈಗೆ ಚುಚ್ಚಿದ.

ಶೃಂಗಾರ-ರೌದ್ರಭಾವಗಳೆರಡರಲ್ಲಿಯೂ ಕಣ್ಣ ನೋಟವು ಬಾಣವಾಗಿ ಕೆಲಸಮಾಡುವುದು. ಆದರೆ ಮೊದಲನೆಯದು ಮೋಹನಾಸ್ತ್ರವಾಗಿ ಬರುವ ಕುಸುಮಬಾಣ; ಎರಡನೆಯದು ಆಗ್ನೇಯಾಸ್ತ್ರವಾಗಿ ಬರುವ ವಿದ್ಯುದ್‌ಬಾಣ.

ಗಿರಿಧರನ ದೃಷ್ಟಿಯು ವಿದ್ಯುದ್‌ಬಾಣದಿಂದ ಸುದರ್ಶನನು ಅಪ್ರತಿಭ ನಾಗಿ ನಿಂತುಬಿಟ್ಟ. ಆತನು ಬಂದುದು–ತನ್ನನ್ನು ಬಿಟ್ಟು ಪ್ರಭೆಯು ಮನೆಗೆ ಊಟಕ್ಕೆ ಹೋಗಿ ಬಂದುದಕ್ಕಾಗಿ–ಗಿರಿಧರನನ್ನು ಹಂಗಿಸಿ, ನಗೆಯಾಡಿ, ಹರಟೆಹೊಡೆದು ಹೋಗಬೇಕೆಂದು. ಆದರೆ ಗಿರಿಧರನ ಮುಖದ ಬಿಗುಹನ್ನೂ ಕೆಂಡವನ್ನು ಕಾರುವ ಕಣ್ಣುಗಳನ್ನೂ ನೋಡಿ ಬೆದರಿದ; ಗಾಬರಿಯ ದನಿಯಲ್ಲಿ ನುಡಿದ:

"ಇದೇನೋ ಗಿರಿಧರ, ಹೊಸರೀತಿ? ಹೀಗೇತಕ್ಕೆ ನೋಡು ತ್ತಿದ್ದೀಯೇ?"

"ನನ್ನದಷ್ಟೇ ಹೊಸರೀತಿಯಲ್ಲ; ನಿನ್ನದೂ ಹೊಸರೀತಿ!"

"ಎಂದರೆ?"

"ಎಂದರೆ ಇನ್ನೇನೂ ಅಲ್ಲ; ಸುದರ್ಶನನು ಹಸುವಿನ ಚರ್ಮ ವನ್ನು ಹೊದ್ದುಕೊಂಡ ಹುಲಿ!"

"ಇದೇನು ಮಾತೋ ಗಿರಿಧರ? ನನಗೊಂದೂ ಅರ್ಥವೇ ಆಗು ಲೊಲ್ಲದಲ್ಲಾ!"

"ಅರ್ಥವಾಗಲಿ, ಆಗದಿರಲಿ! ನೀನು ಇಂದಿನಿಂದ ಉಷೆಯು ಕೂಡ ಒಂದು ಮಾತನ್ನೂ ಆಡತಕ್ಕದ್ದಲ್ಲ."

"ಇದೇನು ಮಾತಿದು? ಏತಕ್ಕಾಗಿಯಪ್ಪಾ ಈ ಆರ್ಡರ್‌ನೆನ್ನು? ಅಲ್ಲವ್ರೋ, ಚಿಕ್ಕತನದಿಂದಲೂ ಉಷೆಯನ್ನು ಎತ್ತಿ ಆಡಿಸಿದ್ದೇನೆ. ಓದು- ಬರೆಹ ಕಲಿಸಿದ್ದೇನೆ. ಇಲ್ಲದ ಸೋದರಿಯ ಕೊರತೆಯನ್ನು ಆಕೆಯಿಂದ ತುಂಬಿಕೊಂಡಿದ್ದೇನೆ. ಈಗ ಈ ನಿನ್ನ ಮಾತನ್ನು ಕೇಳಿ, ಉಷೆಯೊಡನೆ ಮಾತನಾಡುವುದನ್ನು ಬಿಟ್ಟುಬಿಡಲೇ?"

ಗಿರಿಧರನು ಸಿಡಿಲನ್ನು ಗುಡುಗಿಸಿದ:

"ಸೋದರಿಯಂತೆ ಸೋದರಿ! ಇಂತಹ ಶುಕ್ರಾಚಾರ್ಯರು ಜಗತ್ತಿನಲ್ಲಿ ಬಹಳ ಮಂದಿ. ನಮ್ಮ ಮನೆಯಲ್ಲಿರಬೇಕಾದರೆ ನೀನು ನನ್ನ ಮಾತನ್ನು ಕೇಳಲಿಕ್ಕೇ ಬೇಕು. ಇಂದಿನಿಂದ ಉಷೆಯೊಡನೆ ತುಟಿಯನ್ನು ಕೂಡ ಮಿಂಟುಕಿಸಲಾಗದು, ತಿಳಿಯಿತೇನು?"

ತಾನಿಲ್ಲಿ ಇನ್ನು ಹೆಚ್ಚುಕಾಲ ನಿಂತುಕೊಂಡಿರುವುದು ಉಚಿತವಲ್ಲ

ವೆಂದು ಸುದರ್ಶನನಿಗೆ ಎನಿಸಿತೇನೋ! ಗಿರಧರನ ಮಾತಿಗೆ ಒಂದೂ ಎದುರುನುಡಿಯನ್ನು ಕೊಡದೆ ಹಿಂದಿರುಗಿ ನಡೆದ; ತನ್ನ ಮಲಗುವ ಮನೆಯನ್ನು ಬಂದು ಸೇರಿದ.

ಅಡಿಗೆಯವನು ಬಂದು ಸಂಜೆಯ ಊಟಕ್ಕೆ ಎಬ್ಬಿಸಿದರೆ ಗಿರಿಧರನೂ ಏಳಲಿಲ್ಲ, ಸುದರ್ಶನನೂ ಏಳಲಿಲ್ಲ. 'ಹಸಿವು ಇಲ್ಲ' ಎಂದು ಇಬ್ಬರೂ ಹೇಳಿದರು.

"ಈಗಿನ ಹುಡುಗರಿಗೆ ಹಸಿವು ಹೇಗೆ ಆಗುವುದಿಲ್ಲವೋ ಏನೋ! ಇನ್ನೂ ಮದುವೆ ಇಲ್ಲ–ಮುಂಜಿ ಇಲ್ಲ–ಈಗಲೇ ಹೀಗೆ. ನಮ್ಮಂತೆ ಮುದುಕರಾದ ಮೇಲೆಯಂತೂ ಇವರ ಪಾಡನ್ನು ದೇವರೇ ಕೇಳಬೇಕು." ಎಂದು ನುಡಿಯುತ್ತ, ಸಲುಗೆಯ ರೋಷದಲ್ಲಿಯೇ ಅಪ್ಪಣರಾಯರು ಉಂಡು ತೇಗಿದರು.

---

## ೧೨ನೆಯ ಪರಿಚ್ಛೇದ

ಮರುದಿನ ಬೆಳಗಿನಲ್ಲಿ ಗಿರಿಧರನು ಉಷೆಯ ಕಿರುಮನೆಗೆ ಬಂದ. ಉಷಾ ಅಲ್ಲಿ ಇರಲಿಲ್ಲ. ಈಗಲೇ ಬರಬಹುದೆಂಬ ನಂಬುಗೆಯಿಂದ ಆತನು ಅಲ್ಲಿಯೇ ಕುರ್ಚಿಯೊಂದರ ಮೇಲೆ ಕುಳಿತುಕೊಂಡ. ಗಿರಿಧರನಂತಹ ರಾಜಸಸ್ವಭಾವದ ಜನರ ಕೈ ಸುಮ್ಮಗೆ ಕುಳಿತಿರುವುದೇ? ಟೇಬಲ್ಲಿನ ಮೇಲೆ ಓರಣವಾಗಿ ಇರಿಸಿದ ಪದಾರ್ಥಗಳನ್ನು ಅತ್ತಣಿಂದಿತ್ತ ಇತ್ತಣಿಂದತ್ತ ಕಿತ್ತಾಡಲು ತೊಡಗಿದನು. ಒಂದು ಪುಸ್ತಕದ ಅಡಿಯಲ್ಲಿ, ತಾನು ಉಷೆಗೆ ತಂದುಕೊಟ್ಟಿದ್ದ ಕರವಸ್ತ್ರದ ಮಡಿಕೆಯು ಕಣ್ಣಿಗೆ ಬಿದ್ದಿತು. ಅದನ್ನು ಕೈಯಲ್ಲಿ ತೆಗೆದುಕೊಂಡ; ಮಡಿಸಿದುದನ್ನು ಬಿಚ್ಚಿದ. ಬೇರೆಬೇರೆ ನಕ್ಷೆಗಳ ಮೇಲವನು ತನ್ನ ಅಸ್ಥಿರವಾದ ದೃಷ್ಟಿಗಳನ್ನು ಚೆಲ್ಲುತ್ತ ನಡೆದ. ಉಷೆಯು ಹೊಸತಾಗಿ ಹೆಣೆದ 'ಸುದರ್ಶನ' ಎಂಬ ಹೆಸರಿನ ಅಕ್ಷರಗಳನ್ನೂ ನೋಡಿದ; ಎದೆಗುಂಡಿಗೆಗೆ ಸಿಡಿಲು ಬಡಿದಂತಾಯಿತು. ಹೊಟ್ಟೆಯಲ್ಲಿ ಆಣೆಕಲ್ಲು ಇಕ್ಕಿದಂತಾಯಿತು. ಗಿರಿಧರನು ಬೆದರಿಬಿದ್ದ. ತಲೆಯಲ್ಲಿ ಒಂದರಹಿಂದೊಂದು ಯೋಚನೆಗಳು

ಬರಲು ತೊಡಗಿದುವು. ಕಣ್ಣು ಕಿಡಿಯನ್ನುಗುಳುತ್ತಿದ್ದುವು. ಮೂಗು ಮುಸುಗುಟ್ಟುತ್ತಲಿದ್ದಿತು :

"ಗಿರಿಧರನು ಮೆಚ್ಚಿಟ್ಟ ಕರವಸ್ತ್ರದ ಮೇಲೆ ಸುದರ್ಶನನ ಹೆಸರೇ? ಸುದರ್ಶನ! ನಿಜವಾಗಿಯೂ ನೀನು ಆಷಾಢಭೂತಿ! ಮುಗ್ಧೆಯಾದ ಉಷೆಯ ಮನಸ್ಸನ್ನು ಇಷ್ಟೊಂದು ನಿನ್ನ ಕಡೆಗೆ ಎಳೆದುಕೊಳ್ಳುವಂತೆ ಏನೇನು ಕುತಂತ್ರಗಳನ್ನು ರಚಿಸಿದ್ದೀಯೆ? ಅಯ್ಯೋ! ನಮ್ಮ ತಂದೆ ನನ್ನ ಶತ್ರುವನ್ನು ನನ್ನೊಡನೆಯೆ ಸಾಕಿ ಬೆಳೆಯಿಸಿದ್ದಾರಲ್ಲವೇ! ನನ್ನ ಕರುಳಿನ ಚೂರಿಯನ್ನು ತಮ್ಮ ಕೈಯಿಂದಲೆ ಸಾಣೆಹಿಡಿದು, ಸಜ್ಜುಗೊಳಿಸಿ, ಇಟ್ಟಿದ್ದಾರಲ್ಲವೇ! ಅಬ್ಬಾ! ನಂಬುಗೆಯ ಒಡನಾಡಿಯೆಂದು ಉಷೆಯ ವಿಷಯದಲ್ಲಿದ್ದ ನನ್ನ ಪ್ರೀತಿಯ ಕಥೆಯನ್ನು ಆಗಾಗ ಹೇಳುತ್ತಿದ್ದೆನಲ್ಲವೇ ನಿನಗೆ?—ಸುದರ್ಶನ, ನಾನು ಹೇಳಿದಾಗಲೆಲ್ಲ ಸಂತೋಷದ ಸೋಗಿನ ಮಾತಿನಿಂದ 'ಆಗಲಪ್ಪಾ; ಉಷೆಯೆಂದರೆ ಅಂತಿಂತವಳಲ್ಲ, ಅವಳನ್ನು ನಿನ್ನವಳನ್ನಾಗಿ ಮಾಡಿಕೊಂಡರೆ, ನಿಜವಾಗಿಯೂ ನಿನ್ನ ಜೀವನಪಥವು ಸೊಗಸಿನಿಂದ ಸಾಗುವುದು.' ಎಂದು ಬರುಡೆ ಉಸುಳಿಸುತ್ತಿದ್ದೆಯಲ್ಲವೇ? ನೀನು ಗೋಮುಖವ್ಯಾಘ್ರ! ಪಾಪ! ಉಷೆಯದೇನು. ಹೇಳಿಕೇಳಿ ಹೆಂಗುಸು, ಇನ್ನೂ ವಯಸ್ಸು ಚಿಕ್ಕದು, ತನ್ನ ಹಿತಾಹಿತಗಳು ಅವಳಿಗೇನು ತಿಳಿಯುವುವು? ಸವಿಮಾತುಗಳಿಗೆ ಮರುಳಾಗುವುದು ಹೆಂಗುಸರ ಸ್ವಭಾವ. ಸುದರ್ಶನನು ಬುದ್ಧಿವಂತನೆಂದು ಮಂದಿಯ ಹೊಗಳಿಕೆ ಬೇರೆ, ಓದು-ಬರೆಹ ಕಲಿಸಿದ ಅಧಿಕಾರ ಬೇರೆ. ಯಾವಯಾವ ಸವಿಯಾಸೆಗಳನ್ನು ತೋರಿಸಿ, ಆ ಹುಡುಗಿಯ ಮನಸ್ಸನ್ನು ಮೆಚ್ಚಿಸಿಕೊಂಡಿದ್ದಾನೋ ಈ ಸುದಾಮನ ದೊಡ್ಡಪ್ಪನ ಮಗ! ಇವನನ್ನು ಇನ್ನು ಮನೆಯಲ್ಲಿ ಉಳಿಯಗೊಟ್ಟರೆ ಉಷೆಯನ್ನು ನನಗೆ ದಕ್ಕಗೊಡುವನೇ! ಶಾರದತ್ತೆಯ ಮನೆಗೆ ಊಟಕ್ಕೆ ಹೋಗಬೇಕಾದರೆ ಪ್ರಾಣದ ಸುತ್ತು ಬಂದಂತೆ ಆಗಿದ್ದಿತಾದರೂ, ಯೋಗ್ಯವೇಳೆಯಲ್ಲಿಯೆ ಒಂದು ಮಹತ್ತ್ವದ ಮಾತಿನ ಸ್ಪಷ್ಟತೆಯು ಕಂಡುಬಂದಂತಾಯಿತು........" ಇತ್ಯಾದಿ ಮಾತುಗಳ ಸಿಡಿಲಿನ ಮರಿಗಳನ್ನು ಗಿರಿಧರನ ಎದೆಯು ಹಡೆಯುತ್ತಲಿದ್ದಿತು. ಈರ್ಷೆ, ಕ್ರೋಧಗಳ ಆವೇಗದಲ್ಲಿ ಮೂಗಿನ ಉಸಿರು ಒತ್ತರದಿಂದಾಡುತ್ತಿದ್ದಿತು.

ಉಷೆಯು ಒಳಕ್ಕೆ ಬಂದಳು ; ಗಿರಿಧರನನ್ನು ನೋಡಿ ಮಾತನಾಡಿದಳು:

"ನೀನು ಇಲ್ಲಿ ಬಂದು ಕುಳಿತಿದ್ದೀಯಾ–ಗಿರಿಧರ? ಕಿರುಮನೆಯಲ್ಲಿ ನೋಡಿದೆ, ಅಲ್ಲಿ ಕಾಣಲಿಲ್ಲ ನೀನು. ಪಾಪ! ಸುದರ್ಶನನಿಗೆ ಜ್ವರಬಂದು ಬಿಟ್ಟಿದೆ ನೋಡು! ರಾತ್ರಿಯು ಎರಡುಗಂಟೆಗೆ ಜ್ವರ ತುಂಬಿಕೊಂಡಿತಂತೆ. ಈಗ ವಿಪರೀತ ತಲೆನೋವು—ಎನ್ನುತ್ತಿದ್ದಾನೆ. ಹಾಸಿಗೆಯನ್ನು ಬಿಟ್ಟು ಎದ್ದೇ ಇಲ್ಲ. ಸ್ವಲ್ಪ ಅಮೃತಾಂಜನವನ್ನಾದರೂ ತಲೆಗೆ ಹಾಕಿ ತಿಕ್ಕಬೇಕೆಂದಿದ್ದೇನೆ. ನೀನು ಬೇಗನೆ ಡಾಕ್ಟರನ್ನು ಕರೆಯಿಸುತ್ತೀಯಾ?"

ಮಾತಿನ ಕೊನೆಯೊಡನೆಯೆ ಅಮೃತಾಂಜನದ ಡಬ್ಬಿಯನ್ನು ತೆಗೆದುಕೊಂಡು, ಉಷಾ ಹೊರಕ್ಕೆ ನಡೆದಳು. ಗಿರಿಧರನಿಗೆ ಅವಳನ್ನು ತಡೆದು ನಿಲ್ಲಿಸುವುದಕ್ಕೆ ಧೈರ್ಯವಾಗಲೇ ಇಲ್ಲ. ಆಕೆ ಗಡಬಡಿಯಿಂದ ಹೊರಟೇ ಹೋಗಿಬಿಟ್ಟಳು.

ಗಿರಿಧರನ ರೋಷದ ಪರಿಣಾಮವನ್ನು ಪಾಪ, ಉಷೆಯ ಮೇಜಿಗೆ ಅನುಭವಿಸಬೇಕಾಯಿತು. ಆತನು ಮುಖವನ್ನು ಗಂಟಿಕ್ಕಿ, ಅವಡುಗಚ್ಚಿ, ಮುಷ್ಟಿಯನ್ನೆತ್ತಿ ಮೇಜಿಗೊಂದು ಬಳಿತಾದ ಏಟನ್ನು ಕೊಟ್ಟ; ತನ್ನಲ್ಲಿ ತಾನೇ ಮಾತನಾಡಿದ :

"ಸುದರ್ಶನನಿಗಾಗಿ ನಾನು ಡಾಕ್ಟರನ್ನು ಕರೆಯಿಸಲೇ? ಯಮನನ್ನು ಕರೆಯಿಸುತ್ತೇನೆ ಬೇಕಾದರೆ. ಸುದರ್ಶನ, ನಿನ್ನ ತಲೆಗೆ ಉಷೆಯ ಕೈಯ ಅಮೃತಾಂಜನವು ಬೇಕೆ?"

ಗಿರಿಧರನು ಅದೆಷ್ಟೋ ವೇಳೆಯವರೆಗೆ ಯೋಚಿಸುತ್ತ ಅಲ್ಲಿಯೇ ಕುಳಿತಿದ್ದ. ವಸ್ತ್ರವನ್ನು ಮಡಿಸಿ, ಮೊದಲಿದ್ದ ಪುಸ್ತಕದ ಅಡಿಯಲ್ಲಿಯೇ ಇರಿಸಿದ. ಆಗಿನ ಆತನ ರೋಷದ ಮೂರ್ತಿಯೂ—ಹೃದಯದ ಕಳವಳವನ್ನು ಹೊರಕ್ಕೆ ಹಾಕುವಂತಹ ಬಿಸಿಯಾದ ಉಸಿರೊಂದನ್ನು, ಬೆಳಗಿನ ತಣ್ಣನೆಯ ವಾತಾವರಣದಲ್ಲಿ ಬೆರೆಯಿಸಿತು. ಅಡಿಗೆಯಾತನು ಬಂದು ಬೆಳಗಿನ ಉಪಹಾರಕ್ಕೆಂದು ಎಬ್ಬಿಸದಿದ್ದರೆ, ಗಿರಿಧರನು ಅಲ್ಲಿಯೇ ಎಷ್ಟು ಹೊತ್ತು ಕುಳಿತಿರುತ್ತಿದ್ದನೋ!

# ೧೩ನೆಯ ಪರಿಚ್ಛೇದ

" ಸುದರ್ಶನ, ಅಮೃತಾಂಜನವನ್ನು ತಂದಿದ್ದೇನೆ. ಸ್ವಲ್ಪ ತಲೆಗೆ ಹಚ್ಚಿ ತಿಕ್ಕಲೇ? "

" ಬೇಡವಮ್ಮಾ ಏತಕ್ಕೆ? ಈಗ ತಲೆನೋವು ಕೊಂಚ ಕಡಿಮೆ-ಯಿದೆ. "

" ಡಾಕ್ಟರನ್ನು ಬೇಗನೆ ಕರೆದುಕೊಂಡು ಬರುವಂತೆ ಗಿರಿಧರನಿಗೆ ಹೇಳಿ ಬಂದಿದ್ದೇನೆ. ನಾನು ಇದೇ ಈಗ ಕೆಳಕ್ಕೆ ಹೋಗಿದ್ದೆನಲ್ಲವೇ? ಅದೇತಕ್ಕೋ ಏನೋ, ಗಿರಿಧರನು ಬಂದು ನನ್ನ ಕಿರುಮನೆಯಲ್ಲಿ ಕುಳಿತಿದ್ದ. ನಾನು ಅವಸರದಲ್ಲಿ ಹಾಗೆಯೇ ಹೊರಟು ಬಂದುಬಿಟ್ಟೆ; ನಿಂತುಕೊಂಡು ಗಿರಿಧರನ ಜೊತೆಗೆ ಹೆಚ್ಚಾಗಿ ಮಾತನಾಡಲಿಲ್ಲ ಕೂಡ! "

ಸುದರ್ಶನನು ಯಾವುದನ್ನೂ ಆಡದೆ, ಕರುಣೆಯು ಬೆರೆತ ನೋಟದಿಂದೊಮ್ಮೆ ಉಷೆಯ ಕಡೆಗೆ ನೋಡಿ, ಮುಖವನ್ನು ಮುದುರಿಸಿ ಉಸಿರ್-ಗರೆದ; ಉಷೆಯು ಅಮೃತಾಂಜನವನ್ನು ಆತನ ತಲೆಗೆ ತಾಗಿಸಲು ತೊಡಗಿದಳು. ಸುದರ್ಶನನ ದಾಕ್ಷಿಣ್ಯದ ಧ್ವನಿಯ ಮಾತು " ಬೇಡ ಬಿಡಮ್ಮಾ ಉಷಾ! " ಎನ್ನುವುದು; ಇದ್ದುದನ್ನು ಇದ್ದಂತೆಯೆ ಹೇಳುವ ಮನಸ್ಸು-ಹೃದಯಗಳು ಜೊತೆಗೊಂಡು "ಅಯ್ಯೋ ಮಂಕು! ಈ ಬಗೆಯ ಮಮತೆಯ ಉಪಚಾರವನ್ನು ನೀನು ನಿನ್ನ ಜೀವನದಲ್ಲಿ ಇನ್ನಾರಿಂದಲಾದರೂ ಪಡೆಯಬಹುದೇ? ಬೇಡವೆಂದು ಹೇಳಲಿಕ್ಕೆ ನಾಲಗೆಯಾದರೂ ಹೇಗೆ ಏಳುತ್ತದೆ? " ಎಂದು ಅವನನ್ನು ಹಂಗಿಸಿ ಹಂಗಿಸಿ ನುಡಿಯುವುವು ಉಷೆಯು ಆತನಿಗೆ ಅಮೃತಾಂಜನವನ್ನು ತಾಗಿಸಿ, ಮೈಗೆಲ್ಲ ನೀಲಗಿರಿ ತೈಲವನ್ನು ಸವರಿದಳು. ಉಷೆಯ ಹಸ್ತದ ಅಮೃತಸ್ಪರ್ಶವು ಸುದರ್ಶನನ ಮನಸ್ಸಿಗೆ ತುಂಬ ಹಿತವೆನಿಸಿತು. ಹೃದಯವು ಅರಳಿತು. ಕರುಳಿನ ಕುದಿಗೆ ಕೆಲವು ಹೊತ್ತು ತಡೆಯೊದಗಿತು. ಕರುಣಾಸ್ವರದಲ್ಲಿ ಸುದರ್ಶನನು ಮಾತನಾಡಿದ:

"ಒಳ್ಳೆಯ ಗಂಡನನ್ನು ಪಡೆದು ಸುಖವಾಗಿ ಸಂಸಾರ ಮಾಡಮ್ಮಾ ಉಷಾ! "

ತಲೆಯಮೇಲೆ ಕೈಯಾಡಿಸುತ್ತ, ಆಶೆಯು ಬೆರೆತ ನೋಟದಿಂದ ಸುದರ್ಶನನನ್ನು ನೋಡುತ್ತ, ನಾಚಿಕೆಯ ಕಿರುನಗೆಯೊಂದಿಗೆ ಉಷೆಯು ಕೇಳಿದಳು :

" ನಿನಗೆ. . ಸಂಸಾರಸುಖ ಬೇಡವೇ. . ಸುದರ್ಶನ ? "

" ನಾನು ಇಂತಹ ಸಣ್ಣ ಸಾಮಾನ್ಯ ಸಂಸಾರವನ್ನು ಕಟ್ಟಿ-ಕೊಂಡು ಏನು ಮಾಡಲಮ್ಮಾ ! "

" ಎಂದರೆ ? " ಉಷೆಯು ಬೆಚ್ಚಿ ಕೇಳಿದಳು.

" ಅಹುದಮ್ಮಾ ! ನಾನೊಂದು ದೊಡ್ಡ ಸಂಸಾರವನ್ನು ಕೊರಳಿಗೆ ಕಟ್ಟಿಕೊಳ್ಳಬೇಕೆಂದಿದ್ದೇನೆ. ಅದನ್ನು ಸಾಗಿಸುವುದಕ್ಕೆ ಬೇಕಾಗುವ ಸಾಮರ್ಥ್ಯವನ್ನು ಪಡೆಯುವುದಕ್ಕೆಂದು ಸಾಧನೆ ಮಾಡುತ್ತಿದ್ದೇನೆ—ಎಷ್ಟೋಂದೋ ದಿನಗಳಿಂದ ! "

" ಅದಾವುದು ಆ ದೊಡ್ಡ ಸಂಸಾರ? " ಉಷೆಯು ಆತುರಭಾವದಿಂದ ಕೇಳಿದಳು.

" ಉಷಾ, ಆ ದೊಡ್ಡ ಸಂಸಾರ ನಿನಗೆ ಅಪರಿಚಿತವಾದುದೇನೂ ಅಲ್ಲ. ನೋಡುವುದಿಲ್ಲವೇ ? ಬಡತನದ ಆಳವಾದ ಕಂದರದಲ್ಲಿ ಬಿದ್ದು ಬಾಯಿ ಬಾಯಿ ಬಿಡುತ್ತಿರುವ ಜನರು, ನಾಡಿನಲ್ಲಿ ನೋಡಿದಲ್ಲೆಲ್ಲ ಕಣ್ಣಿಗೆ ಬೀಳುತ್ತಿದ್ದಾರೆ; ಆ ಜನರಿಗೆ ಬಿದ್ದ ಕಂದರದಿಂದೆದ್ದು ಮುಂದುವರಿಯುವುದಕ್ಕೆ ಮಾರ್ಗವೇ ಇಲ್ಲದಂತಾಗಿದೆ. ಮಾರ್ಗಗಳಿದ್ದರೂ ದುಃಖದಿಂದ ಕಂಗೆಟ್ಟು ಮುಂಗಾಣದವರಾಧ ಜನರಿಗದು ಕಾಣಲೊಲ್ಲದಾಗಿದೆ. ಅವರಿಗೆ ಮಾರ್ಗದರ್ಶಕರ ಆವಶ್ಯಕತೆಯುಂಟೆಂಬ ಮಾತನ್ನು ನನ್ನ ಕಿವಿಯಲ್ಲಿ —ನಿಮಿಷ ನಿಮಿಷಕ್ಕೂ—ಯಾರೋ ಕೂಗಿ ಹೇಳುತ್ತಿದ್ದಾರೆ. ಉಷಾ, ದೇಶದಲ್ಲಿ ನಿನ್ನಂತಹ ಸಾವಿರಾರು, ಲಕ್ಷಾವಧಿ, ಕೋಟ್ಯವಧಿ ಹೆಣ್ಣು-ಮಕ್ಕಳು ಅಭಿಮಾನದ ಅರಿವು ಇಲ್ಲದೆ, ಅರೆಬೆತ್ತಲೆಯಾಗಿ ತಿರುಗುತ್ತಿರುವುದರ ಚಿತ್ರವು ಕಣ್ಣೆದುರು ಬಂದು ನಿಂತು, ನನ್ನನ್ನು ಯಾವಾಗಲೂ ಅಣಕಿಸುತ್ತಿದೆ. ಹೊಟ್ಟೆಗೆ ಹಾಲಿಲ್ಲದೆ ಕಿರಿಚುತ್ತಿರುವ ಎಳಗೂಸುಗಳ

ಬಳಗವು ನನ್ನ ಸವಿಯೂಟದೆಡೆಯಲ್ಲಿ ವಿಷವನ್ನು ಬೆರೆಯಿಸುತ್ತಿದೆ. ಮರಗಳಡಿಯಲ್ಲಿಯೊ, ಮುರುಕು ಗುಡಿಸಲಲ್ಲಿಯೊ–ಬರಿನೆಲದಮೇಲೆ ಬಿದ್ದುಕೊಂಡು ಒದ್ದಾಡುತ್ತ ನರಳುತ್ತಿರುವ ಬಡವರಾದ ರೋಗಿಗಳ ಕೂಗಾಟವು ನನ್ನ ಗಾಢನಿದ್ರೆಯನ್ನು ದೂಡಿಹಾಕುತ್ತಲಿದೆ. ಹಗ-ಲಿರುಳೂ ದುಡಿದು, ಹಿಟ್ಟು-ಬಟ್ಟೆಗಳನ್ನು ಕಾಣದ ಬಾಂಧವರ ಆರ್ತ-ಧ್ವನಿಯು, ನಾನು ಹಾಡುತ್ತಿರುವ ಹಾಡಿನಲ್ಲಿ ಅಪಸ್ವರವನ್ನು ಕೂಡಿಸುತ್ತಿದೆ. ಉಷಾ! ನಾನು ಅಂತಹ ಹೀನ, ದೀನ, ದರಿದ್ರರಾದ ಹೆಂಗುಸರ, ಗಂಡುಸರ, ಹುಡುಗರ, ಎಳಗೂಸುಗಳ ವಿರಾಟಸಂಸಾರದ ನೊಗಕ್ಕೆ ಹೆಗಲನ್ನು ಕೊಡಬೇಕೆಂದಿದ್ದೇನೆ. ನಾನು ಹುಟ್ಟಿದುದೇ ಬಡತನದ ಹೊಟ್ಟೆಯಿಂದ. ಆ ತಾಯಿಯ ಸೇವೆಯಲ್ಲಿರುವುದೆ ನನ್ನ ಕರ್ತವ್ಯವಾಗಿದೆ. ಉಷಾ, ಈ ಮೂರು ದಿನದ ಸಿರಿವಂತಿಕೆಯಲ್ಲಿ ನನಗೆ ಸ್ಥಾನವೆಲ್ಲಿ?''

ಉಷೆಯು ಮೆಲ್ಲಗೆ ತಲೆಯನ್ನು ತಟ್ಟುತ್ತ ಸುದರ್ಶನನ ಮಾತುಗಳನ್ನು ಕೇಳುತ್ತಿದ್ದಳು. ತಾನೆತಾನಾಗಿ ನಿಟ್ಟುಸಿರೊಂದು ಅವಳ ಮುಖದಿಂದ ಹೊರಕ್ಕೆ ಬಂದಿತು. ಸುದರ್ಶನನು ನಿಟ್ಟಿಸಿ ನೋಡಿದ್ದರೆ ಉಷೆಯ ಕಣ್ಣುಗಳು ಆರ್ದ್ರವಾಗಿದ್ದುದನ್ನು ಆತನು ನೋಡಬಹುದಾಗಿದ್ದಿತು. ಆವೇಶ ಹೊಂದಿದವನಂತಾಗಿ ಸುದರ್ಶನನು ತನ್ನ ಮಾತನ್ನು ಮುಂದುವರಿಸಿದನು:

"ಆ ಸಂಸಾರ ಸಾಗಿಸಬೇಕಾದರೆ ಈ ಸಂಸಾರಿಗಳಿಂದಾಗದು. ಉಷಾ! ಅದಕ್ಕೆ ಬೇಕು ಬ್ರಹ್ಮಚಾರಿಗಳ ಬಳಗ! ಅದಕ್ಕೆ ಬೇಕು ಸಂನ್ಯಾಸಿಗಳ ತಂಡ! ನಾನೂ ಒಬ್ಬ ಆ ಬಳಗದ ಆ ತಂಡದ–ಒಂದು ಘಟಕವಾಗಬೇಕೆಂದಿದ್ದೇನೆ. ಸುತ್ತುಮುತ್ತಲಿಂದಲೂ ಸೆಳೆಯುತ್ತಿರುವ ಮೋಹ-ಮಮತೆಗಳ ಪಾಶಗಳನ್ನೆಲ್ಲ ಹರಿದೊಗೆಯುವ ಸಾಮರ್ಥ್ಯವನ್ನು ನಾನಿಂದು ಪಡೆದಿದ್ದೇನೆ!''

ತನ್ನ ತಲೆಯ ಮೇಲಾಡುತ್ತಿದ್ದ ಉಷೆಯ ಕೈಯನ್ನು ಗಟ್ಟಿಯಾಗಿ ತನ್ನ ಕೈಯಿಂದ ಹಿಡಿದು, ಸುದರ್ಶನನು ಪುತ್ತೆ ಮತ್ತೆ ಭಾವಾವೇಗದಿಂದ ಹೇಳಿದ:

"ಉಷಾ! ನಾನಿಂದು ಎಲ್ಲ ಮೋಹ-ಮಮತೆಗಳ ಉರುಲುಬಲೆಯನ್ನು ಹರಿದೊಗೆದು, ಹೊರಕ್ಕೆ ನುಗ್ಗಲು ಹೊಂಚುಹಾಕುತ್ತಿದ್ದೇನೆ."

ಸುದರ್ಶನನ ದೇಹವು ಕಂಪಿಸಿತು. ರಕ್ತವು ಇಮ್ಮಡಿವೇಗದಿಂದ ಹರಿಯಿತು. ಮೈಯ ನವಿರು ನಿಮಿರಿನಿಂತಿದ್ದಿತು. ಬಂದೆರಡು ಹನಿ ನೀರಿನಿಂದ ಬೆರತಿದ್ದ ಕಂಗಳ ನೋಟವು, ಆಶೆಯನ್ನು ಸೂಚಿಸುತ್ತ ಉಷೆಯ ಹೃದಯವನ್ನು ಪ್ರವೇಶಿಸುತ್ತಿದ್ದಿತು. ಎಲ್ಲ ಮೋಹ-ಮಮತೆಗಳನ್ನು ಹರಿದೊಗೆಯಲಿಕ್ಕೆ ಸಿದ್ಧನಿರುವೆನೆಂದು ಬಾಯಿಬಢಾಯಿ ಕೊಚ್ಚುತ್ತಿರುವ ಸುದರ್ಶನನ ಸುಳ್ಳನ್ನು ಬಯಲಿಗೆಳೆಯುವ ಕೆಲಸವನ್ನು, ಆತನ ಆ ಕಣ್ಣುಗಳು ಚೆನ್ನಾಗಿ ಮಾಡುತ್ತಿದ್ದುವು. ತಾನೇನು ಮಾತನಾಡಬೇಕೆಂಬುದು ತಿಳಿಯದೆ ಉಷೆಯು, ಸುದರ್ಶನನ ಕೈಯಲ್ಲಿ ತನ್ನ ಕೈಯನ್ನು ಕೊಟ್ಟು ಕುಳಿತುಬಿಟ್ಟಳು; ನೆಟ್ಟ ನೋಟದಿಂದ ಆತನ ಮುಖವನ್ನು ಎಡೆಬಿಡದೆ ನೋಡುತ್ತಲಿದ್ದಳು.

'ಪಾಣಿಗ್ರಹಣ' ಎಂದು ಮದುವೆಗೆ ಹೆಸರಿದೆ. ಹಾಗಾದರೆ ಸುದರ್ಶನನು ಉಷೆಯ ಪಾಣಿಯನ್ನು ಗ್ರಹಣಮಾಡಿದನಲ್ಲವೇ! ಇದನ್ನೂ ಮದುವೆಯೆಂದು ಕರೆದರೆ ನಡೆಯಬಹುದೇ? ಸರಿ, ಹಾಗೆ ಕರೆದರೆ ಮದುವೆಮಾಡಿಸುವ ಪುರೋಹಿತರು, ತಮ್ಮ ದಕ್ಷಿಣಾದ್ರವ್ಯಕ್ಕಾಗಿ ನಮ್ಮ ಮೇಲೆ ಕೋರ್ಟಿನಲ್ಲಿ ದೂರುಹಾಕಬಹುದು. ಬಾಯ ಬರವನ್ನು ತೀರಿಸಿಕೊಳ್ಳಲು ಕಾದುಕೊಂಡು ಕುಳಿತ ಭೋಜನಪ್ರಿಯರು, ನಮಗೆ ಸಾವಿರ ಸಾವಿರ ಶಾಪಗಳನ್ನು ಕೊಡಬಹುದು. ಕುಣಿತಕ್ಕೆಂದು ಬರುವ ಸೂಳೆಯರು, ನಮ್ಮನ್ನು ಕಂಡಲ್ಲೆಲ್ಲ ಬೈದು ಚಿಟುಕುಮುರಿಯಬಹುದು. ಬಡವರಾದ ವಾದ್ಯವಾದನಕಾರರ ಹೊಟ್ಟೆಯಮೇಲೆ ಕಾಲನ್ನು ತಂದ ಪಾತಕವನ್ನು ಹೊರಬೇಕಾದ ಸಂದರ್ಭವೊದಗಬಹುದು. ಇನ್ನೂ ಒಂದು ದೊಡ್ಡ ಹೆದರಿಕೆ: ನಮ್ಮ ಹೆಣ್ಣುಮಕ್ಕಳು ಸಭೆ ಸೇರಿದಲ್ಲೆಲ್ಲ "ಇದೇನೇ ತಾಯಿ! ಒಂದು ವರದಕ್ಷಿಣೆಯಿಲ್ಲ, ವರೋಪಚಾರವಿಲ್ಲ, ಮೆರೆವಣಿಗೆಯಿಲ್ಲ, ಇದೆಂತಹ ಮದುವೆ!" ಎಂದು ಮುಖ ಮುದುರಿಸುತ್ತ ಬೀಳುಗಳೆಯಬಹುದು. ಇಷ್ಟೊಂದು ಕಷ್ಟ-ನಷ್ಟಗಳನ್ನು ಅನು-

ಭವಿಸಲಿಕ್ಕೆ ಸಿದ್ಧರಾಗಿ, ಈ ಪಾಣಿಗ್ರಹಣವನ್ನು ಆ ಪಾಣಿಗ್ರಹಣವೆಂದು ಹೇಳಬೇಕಾದ ಅಗತ್ಯವಾದರೂ ನಮಗೇನಿದೆ. . ಅಷ್ಟೊಂದು! ಮಿಕ್ಕ ಎಲ್ಲರಂತೆ ನಾವೂ ಬಾಯಿಮುಚ್ಚಿ ತೆಪ್ಪಗೆ ಕುಳಿತಿದ್ದರಾಗದೇ? ಇಲ್ಲದ ಊರ ಕಾರಭಾರವನ್ನು ತೆಗೆದುಕೊಂಡು ನಮಗೇನು ಮಾಡಬೇಕಾಗಿದೆ? ಅದರಲ್ಲಿಯೂ ಕಂಡ ಮಾತನ್ನು ಕಂಡಂತೆ ಹೇಳಿದರೆ ಕೆಂಡದಂತಾಗುವ ಜನರೇ ಬಹಳ ಲೋಕದಲ್ಲಿ!

"ಉಷಾ! ಉಷಾ!" ಎಂದು ಕೂಗುತ್ತ ಯಶೋದಮ್ಮ ಒಮ್ಮೆಲೆ ಒಳಕ್ಕೇ ಬಂದುಬಿಟ್ಟರು. ಸುದರ್ಶನನು ಹಾರಿಬಿದ್ದು ಉಷೆಯ ಕೈಯನ್ನು ಬಿಟ್ಟನು. ಉಷೆಯು ಹಿಂದಕ್ಕೆ ಸರಿದು ಸಾವರಿಸಿಕೊಂಡು ಕುಳಿತಳು. ಯಶೋದಮ್ಮ ಬಂದು ಸುದರ್ಶನನ ಮೈಯನ್ನು ಮುಟ್ಟಿನೋಡಿ ನುಡಿದರು:

"ಜ್ವರವೇನೂ ಹೆಚ್ಚಿಗಿಲ್ಲ; ಆದರೆ ಒಂದೇ ದಿನದಲ್ಲಿ ಮುಖವು ಎಷ್ಟು ಬಾಡಿಹೋಗಿದೆಯಲ್ಲವೋ ಸುದರ್ಶನ!"

"ತಲೆನೋವು ಬಹಳವಂತೆ ಅತ್ತೆಮ್ಮಾ!" ಉಷಾ ಹೇಳಿದಳು.

"ಇದೀಗ ಕಾಫೀ ಬಂದೊಡನೆ ನಾನೇ ಸುದರ್ಶನನಿಗೆ ಕುಡಿಸಿ ಬರುತ್ತೇನೆ; ನೀನು ಕೆಳಕ್ಕೆ ನಡೆ! ಬೆಳಗಿನಿಂದಲೂ ಇಲ್ಲಿಯೇ ಕುಳಿತಿರುತ್ತೀಯೇನೊ! ಹೆರಳು-ಗಿರಳು ಹಾಕಿಕೊಳ್ಳುವುದಿಲ್ಲವೇ?"

ಉಷಾ ಕೆಳಕ್ಕೆ ನಡೆದಳು. ಯಶೋದಮ್ಮನ ಆತ್ಮೀಯತೆಯ ಉಪಚಾರವೂ ಸುದರ್ಶನನ ಮನವನ್ನು ಸ್ವಲ್ಪ ತಣಿಸಿತು. ಮುದುಕಿಯ ಅಕೃತ್ರಿಮವಾದ ಮಮತೆಯನ್ನು ಕಂಡು, ಆತನ ಕಣ್ಣುಗಳು ಎಡೆ-ಬಿಡದೆ ಕೃತಜ್ಞತೆಯನ್ನು ಧಾರೆಯೆರೆಯುತ್ತಿದ್ದುವು.

## ೧೪ನೆಯ ಪರಿಚ್ಛೇದ

ಅಪ್ಪಣರಾಯರು ಅಡಿಕೆಲೆ ಬಾಯಾಡಿಸುತ್ತ ದಿಂಬಿಗೆ ಒರಗಿಕೊಂಡು ಕುಳಿತಿದ್ದಾರೆ. ಗಡಿಯಾರವು ನಾಲ್ಕು ಬಾರಿಸಿದುದನ್ನು ಈಗ ಐದುನಿಮಿಷಗಳ ಹಿಂದೆಯೆ ಅವರು ಕೇಳಿದ್ದರು. ಗಡಿಯಾರದ ಗಂಟೆಯನ್ನು ಕೇಳಿದೊಡನೆಯೆ ರಾಯರಿಗೆ ಬೆಳ್ಳಿಕೋಟೆಯ ಭೈರವನ ದೇವಾಲಯದ ಮಧ್ಯರಂಗದ ಗಂಟೆಯು ನೆನಪು ಆಯಿತು. ತಾವು ಅಲ್ಲಿ ಇರುವಾಗ, ರವಿವಾರಕ್ಕೊಮ್ಮೆ ದೇವಾಲಯಕ್ಕೆ ಹೋಗಿ, ಮೇಲೆ ಕಟ್ಟಿದ್ದ ಗಂಟೆಯನ್ನು ಹಾರಿಹಾರಿ ಹೊಡೆಯುತ್ತಿದ್ದುದು ಜ್ಞಾಪಕಕ್ಕೆ ಬಂದಿತು. ಒಮ್ಮೆಲೆ ಭೈರವನ ಭಕ್ತಿಯು ರಾಯರ ಅಂತಃಕರಣವನ್ನು ಹಿಗ್ಗಿಸಿತು. ಈ ಸಲ ಸುಗ್ಗಿಯ ಕಾಲದಲ್ಲಿ ಬೆಳ್ಳಿಕೋಟೆಗೆ ತಾವೇ ಹೋಗುವುದಾದರೆ, ಮರೆಯದೆ ಭೈರವನಿಗೆ ದೀಪೋತ್ಸವವನ್ನು ಮಾಡಿಸಬೇಕೆಂಬ ವಿಚಾರವೊಂದು ಅವರ ಮನದ ಮುಂದೆ ಕುಣಿದಾಡಿ ಹೋಯಿತು. ತಮ್ಮಲ್ಲಿ ಇದ್ದಷ್ಟು ಭೈರವನ ವಿಷಯಕವಾದ ಭಕ್ತಿ-ವಿಶ್ವಾಸಗಳು ಗಿರಿಧರನಲ್ಲಿ ಇಲ್ಲವಲ್ಲ—ಎಂಬ ಅಸಮಾಧಾನದ ಕ್ಷಣವೂ ಒಂದುಸಲ ನಾಯಕರೆದುರಿನಲ್ಲಿ ನಿಂತು ಹೋಯಿತು.

ಯಶೋದಮ್ಮ ಔದಾಸೀನ್ಯಭಾವದವರಾಗಿ ಅಲ್ಲಿಗೆ ಬಂದರು. ರಾಯರ ಬಳಿಯಲ್ಲಿ ಕುಳಿತುಕೊಂಡರು. ರಾಯರು ಸಣ್ಣಗಿನ ನಗೆಯೊಂದಿಗೆ ಹೆಂಡತಿಯೊಡನೆ ಮಾತನಾಡುವುದಕ್ಕೆ ಮೊದಲುಮಾಡಿದರು:

"ಈ ವರುಷ..ಸುಗ್ಗಿಗೆ..ನಾವಿಬ್ಬರೂ ಸೇರಿ ಬೆಳ್ಳಿಕೋಟೆಗೆ ಹೋಗೋಣವೇ ?"

"ಸುಗ್ಗಿಯ ಮಾತು ಈಗ—ಇನ್ನೂ ಬೇಸಗೆಯಲ್ಲಿ ಏತಕ್ಕೆ ? ಸದ್ಯ ಒಂದು ಮಾತು: ನಿನ್ನೆ ಊಟಕ್ಕೆ ಹೋಗಿ ಬಂದಾಗಿನಿಂದ ಗಿರಿಧರನು ಮುಖ ಗಂಟುಹಾಕಿಕೊಂಡೇ ಇದ್ದಾನೆ. ಊಟಮಾಡದೆ ಎಂದೂ ಮಲಗದವನು, ನಿನ್ನೆಯ ರಾತ್ರಿ ಹಸಿವು ಇಲ್ಲವೆಂದು ಹೇಳಿ ಹಾಗೆಯೆ ಮಲಗಿಕೊಂಡುಬಿಟ್ಟ. ಯಾರೊಡನೆಯೂ ಹೆಚ್ಚಾಗಿ ಮಾತಿಲ್ಲ ಕಥೆಯಿಲ್ಲ. ಅದೇನು ಕಾರಣ ಹೀಗಿರಬಹುದು ?"

"ಅವನ ಮನಸ್ಸಿನಲ್ಲಿದ್ದುದು ನನಗೇನು ಗೊತ್ತು? ನಾನೇನು ಭೈರವದೇವರ ಪೂಜಾರಿಯೇ, ಕಣಿಹೇಳುವೆನೇ? ಬೇಕಾದರೆ ಅವನನ್ನೇ ಕೇಳಿಬಿಡಬಹುದಲ್ಲವೇ?"

"ನಿಮ್ಮ ಶಾರದಕ್ಕ ಏನಾದರೂ ಹೇಳಿರಬಹುದೇನು?"

ರಾಯರು ಅರೆಗಣ್ಣಾನೋಟದವರಾಗಿ ನಸುವೇಳೆ ಯೋಚಿಸಿದರು; ಬಳಿಕ ಹೇಳಿದರು:

"ಹಾಂ! ಹಾಂ! ನಿನ್ನ ಕಲ್ಪನೆಗೂ ಒಂದು ಅರ್ಥವಿದೆ ನೋಡು. ಗಿರಿಧರನಿಗೆ ಪ್ರಭೆಯನ್ನೇ ಮಾಡಿಕೊಳ್ಳಬೇಕೆಂದು ಅಪೇಕ್ಷೆಯಿರಬಹುದು. ಉಷೆಯನ್ನು ಮದುವೆಯಾಗುವುದಕ್ಕೆ ನೀನೇ ಒತ್ತಾಯಪಡಿಸಿ ಅವನನ್ನು ಒಪ್ಪಿಸಿರಬಹುದು. ಇದನ್ನೆಲ್ಲ ಗಿರಿಧರನು ಶಾರದಕ್ಕನ ಮುಂದೆ ಹೇಳಿರಬಹುದು. ಸರಿಯಾದ ಮಾತು ನೋಡು! ಹೇಳಿಕೇಳಿ ಉಷೆಯು ಪರದೇಶಿ ಹುಡುಗಿ; ಕೊಡುವವರಿಲ್ಲ, ಕೊಂಬುವವರಿಲ್ಲ. ಅವನಾದರೂ ಏತಕ್ಕಾಗಿ ಮಾಡಿಕೊಳ್ಳಬೇಕು? ಸೋದರತ್ತೆಯೆಂದು ಸಲುಗೆಯಿಂದ ಒಂದೆರಡು ಮಾತುಗಳನ್ನು ಹೃದಯ ಬಿಚ್ಚಿ ಗಿರಿಧರ ಆಡಿರಬಹುದು. ಆಕೆಯೇ ಅವನಿಗೆ ಏನಾದರೊಂದು ಯುಕ್ತಿಯನ್ನು ಹೇಳಿಕೊಟ್ಟಿರಬಹುದು. ಎಂತಲೇ ಅವನು ಮುಖ ಸಿಂಡರಿಸಿಕೊಂಡಿರಬಹುದು."

"ಸರಿಯೆ! ಉಷೆಯನ್ನು ಗಿರಿಧರನಿಗೆ ತೆಗೆದುಕೊಳ್ಳಬೇಕೆಂದು ನನ್ನದೇನೂ ಹಟವಿಲ್ಲ. ಎಷ್ಟೋಸಲ ಪರ್ಯಾಯೋಕ್ತಿಗಳಿಂದ, ಉಷೆಯ ವಿಷಯಕ ಪ್ರೀತಿಯ ವಿಚಾರಗಳನ್ನು ಗಿರಿಧರನೇ ನನ್ನೆದುರಿಗೆ ಆಡಿ ತೋರಿಸಿದ್ದಾನೆ. ಆತನಿಗೆ ಸಂಗೀತ ಸೇರುವುದಲ್ಲವೇ? ಉಷೆಯ ಸಂಗೀತಕ್ಕಂತೂ ಆತನು ಮರುಳನಾಗಿ ಹೋಗಿದ್ದಾನೆ. ಅಲ್ಲದೆ ಸುದರ್ಶನನೂ ಎರಡು ಮೂರುಸಲ ಹೇಳಿದ್ದ—ಗಿರಿಧರನಿಗೆ ಉಷೆಯನ್ನೇ ಲಗ್ನವಾಗಬೇಕೆಂಬ ಅಪೇಕ್ಷೆಯಿದೆಯೆಂದು!"

"ಆ-ಹ್ಹಾ! ಇಷ್ಟರ ಮೇಲಿಂದಲೇ ನೀನು ಗಿರಿಧರನ ಕೊರಳಿಗೆ ಉಷೆಯನ್ನು ಕಟ್ಟಬೇಕೆಂದಿದ್ದೀಯೇನು? ಹಿಂದಿನ ವಿಚಾರ ಇಂದು ಬದಲಾಗಬಾರದೇಕೆ? ಈಗ ಇಲ್ಲಿಯೇ ನೋಡು! ನಾನಿಂದು ಭೈರವನಿಗೆ ದೀಪೋತ್ಸವ ಮಾಡಿಸಬೇಕೆಂದು ವಿಚಾರಮಾಡಿದ್ದೇನೆ; ನಾಳೆ

ಮತ್ತೊಂದು ವಿಚಾರ ಬಂದು, ದೀಪೋತ್ಸವವನ್ನು ನಿಲ್ಲಿಸಿಯೂ ಬಿಡ ಬಹುದು. ವಿಚಾರಮಾಡಿ ನೋಡು! ಶಾರದಕ್ಕನಿಗೆ ಪ್ರಭಾ ಒಬ್ಬಳೇ ಒಬ್ಬಳು ಹೆಣ್ಣುಮಗಳು; ಆಕೆಯು ಅಳಿಯನಾಗಬೇಕೆಂದು ಯಾರು ಇಷ್ಟಪಡಲಿಕ್ಕಿಲ್ಲ?''

"ನಾನೇನು ಬೇಡವೆಂದು ಹಟಹಿಡಿದಿರುವೆನೇ? ಹಾಗೆಂದು ಸ್ಪಷ್ಟವಾಗಿ ಹೇಳಿದರೆ ಆಗುವುದಿಲ್ಲವೇ? ಸಿಟ್ಟು-ಸೆಡವುಗಳೇತಕ್ಕೆ?''

"ಅಲ್ಲವೇ, ಎಂತಹ ಹುಚ್ಚಿ ನೀನು?..ಮದುವೆಯ ಮಾತು! ನಾವೇ ಸವಿಮಾತಿನಿಂದ ದಮ್ಮಿಸಿ ಕೇಳಿಕೊಳ್ಳಬೇಕಲ್ಲವೇ ಆತನ ಅಭಿ-ಪ್ರಾಯವನ್ನು? ಹಿರಿಯರೆದುರಿಗೆ ನಾಚಿಕೆ ಪಾಚಿಕೆ ಇಲ್ಲವೇ ಅವನಿಗೆ?''

"ಹಾಗಾದರೆ ಗಿರಿಧರನನ್ನು ಕರೆಯಿಸಲೇ?..ಇನ್ನೊಬ್ಬರಿಂದ ಬೇಡ; ನಾನೇ ಹೋಗಿ ಕರೆದುಕೊಂಡು ಬರುತ್ತೇನೆ!''

ಎಂದು ನುಡಿದು ಯಶೋದಮ್ಮ ಎದ್ದು ನಡೆದರು. ರಾಯರು ಅಡಿಕೆಲೆಯ ಡಬ್ಬಿಯನ್ನು ಮುಂದಕ್ಕೆ ಸರಿಸಿಕೊಂಡು, ಅಡಿಕೆಲೆ ಅಗಿಯುವ ಕೆಲಸವನ್ನು ಆರಂಭಿಸಿದರು.

ಮೂರು ನಾಲ್ಕು ನಿಮಿಷ ಕಳೆದಿರಬಹುದು. ಗಿರಿಧರನನ್ನು ಕರೆದುಕೊಂಡು ಯಶೋದಮ್ಮ ಮರಳಿ ಬಂದರು. ಬಿಗಿದ ಮೊಗದಿಂದ ಗಿರಿಧರನು ಮತ್ತೊಂದು ದಿಂಬಿಗೆ ಒರಗಿ ಕುಳಿತ; ಯಶೋದಮ್ಮ ಮಗನಿಗೆ ಸಮೀಪದಲ್ಲಿಯೆ ಕುಳಿತುಕೊಂಡರು. ರಾಯರು ಪ್ರೀತಿ-ಪೂರಿತ ಗಾಂಭೀರ್ಯದಿಂದ ಕೇಳಿದರು:

"ಏನಪ್ಪಾ ಗಿರಿಧರಾ, ನಿನ್ನೆಯಿಂದ ಗಂಟುಮೊಗದವನಾಗಿರುತ್ತೀಯಂತೆ! ಯಾರೊಡನೆಯೂ ಮಾತಾಡುತ್ತಿಲ್ಲವಂತೆ! ಕಾರಣವೇನಾದರೂ ಇದೆಯೋ ಇದಕ್ಕೆ?''

ಗಿರಿಧರನ ಮುಖವು ಇನ್ನಿಷ್ಟು ಗಂಭೀರವಾಯಿತು. ಮಾತನ್ನೇನೂ ಆಡದೆ, ಶೂನ್ಯದೃಷ್ಟಿಯುವನಾಗಿ ಕುಳಿತನು. ಮರುಕದ ಧ್ವನಿಯಲ್ಲಿ ತಾಯಿ ಕೇಳಿದರು:

"ಏನು ಗಿರಿಧರಾ! ಮಾತನಾಡುವುದಿಲ್ಲವೇ?''

ಗಿರಿಧರನು ತಾಯಿಯ ಕಡೆಗೊಮ್ಮೆ ವಿಚಿತ್ರವಾದ ನೋಟದಿಂದ ನೋಡಿದ; ಸಲುಗೆಯ ಸಿಟ್ಟಿನ ಸ್ವರದಲ್ಲಿ ನುಡಿದ:

"ಏನು ?. . ಏನು ಮಾತನಾಡಲಿ ?"

ರಾಯರು ಕೊಂಚ ರೇಗಿದವರಾಗಿ ಕೇಳಿದರು:

"ಏನು ಮಾತಾಡಲಿ — ಎಂದರೆ! ಮನಸ್ಸಿನಲ್ಲಿ ಇದ್ದದ್ದನ್ನು ಸ್ಪಷ್ಟವಾಗಿ ಒಡೆನುಡಿದುಬಿಟ್ಟರೆ ಆಗದೇ ? ನಿನ್ನ ಮನಸ್ತಾಪಕ್ಕೆ ಕಾರಣ ರಾದರೂ ಯಾರು ?"

ಗಿರಿಧರನು ನಿಧಾನವಾಗಿ ಉತ್ತರಕೊಟ್ಟನು.

"ನೀವೇ ಕಾರಣರು . . ನನ್ನ ಮನಸ್ತಾಪಕ್ಕೆ !"

ತತ್ತ್ವವೊಂದನ್ನು ಕಂಡುಹಿಡಿದ ತಾತ್ತ್ವಿಕನ ಆನಂದಕ್ಕೆ ಎಡೆಗೊಟ್ಟ ಮುಖದವರಾಗಿ ರಾಯರು, ಯಶೋದಮ್ಮನನ್ನು ನೋಡುತ್ತ ಹೇಳಿದರು:

"ನನ್ನ ಊಹೆಯೆಲ್ಲವೂ ಸರಿಯಾಗಿದೆ ನೋಡು !" ಗಿರಿಧರನ ಕಡೆಗೆ ತಿರುಗಿ ಮಾತನಾಡಿದರು:

"ಗಿರಿಧರಾ, ನಿನಗೆ ಉಷೆಯೊಡನೆ ಲಗ್ನ ಬೇಡವಾಗಿದ್ದರೆ ಪ್ರಭೆಯೊಡನೆಯೇ ಮಾಡುತ್ತೇವೆ. ಅದಕ್ಕೇತಕಿಷ್ಟು ? ನಮಗೇನು ಹತ್ತೆಂಟು ಜನ ಮಕ್ಕಳಿಲ್ಲ ; ನೀನು ಒಬ್ಬನೇ ಒಬ್ಬ. ನಿನ್ನ ಇಷ್ಟವೇ ನಮ್ಮ ಇಷ್ಟವಲ್ಲವೇ ?"

ಬೆರಗುನುಡಿಗಳಲ್ಲಿ ಗಿರಿಧರನು ಕೇಳಿದ:

"ಉಷೆಯೊಡನೆ ಲಗ್ನ ನನಗೆ ಬೇಡವಾಗಿದೆಯೆಂಬ ಮಾತನ್ನು ನಿಮಗೆ ಯಾರು ಹೇಳಿದರು ?"

ರಾಯರು ಹೆಮ್ಮೆಯ ನಗೆ ನಗುತ್ತ, ಹೆಂಡತಿಯ ಕಡೆಗೆ ನೋಡುತ್ತ ನುಡಿದರು:

"ನಮಗೇನೂ ಊಹಾಶಕ್ತಿ ಇಲ್ಲವೆಂದು ಭಾವಿಸಿದ್ದಾನೆ ನೋಡು ಈ ಹುಡುಗ. ಅಲ್ಲವೋ, ನಿನ್ನೆ ಶಾರದಕ್ಕ ನಿನಗೆ ಏನೇನು ಹೇಳಿದಳು ?"

"ಇನ್ನೇನು ಹೇಳುವಳು ? ಇದ್ದ ಮಾತನ್ನು ಹೇಳಿದಳು."

ಗಿರಿಧರನ ಮಾತಿನ ರೀತಿಯಲ್ಲಿಯೇ ತಾಯಿ ಮಾತನಾಡಿದಳು:

"ಪ್ರಭೆಯೊಡನೆ ಮದುವೆಯಾಗಲಿಕ್ಕೆ ಮನಸ್ಸನ್ನು ಮೆಚ್ಚಿಸಿದಳು; ನಿನ್ನನ್ನು ರೇಗಿಗೆಬ್ಬಿಸಿ ಕಳುಹಿದಳು— ಅಹುದಲ್ಲವೇ ?"

"ರೇಗುವಂತಹ ಕೆಲಸವಾದರೆ ರೇಗಬೇಕಾದುದು ಸ್ವಾಭಾವಿಕ!" ಗಿರಿಧರನ ಮಾತಿದು.

"ಬೇಡವಪ್ಪಾ ! ಉಷೆಯು ನಿನಗೆ ಇಷ್ಟವಿಲ್ಲದಿದ್ದರೆ ಪ್ರಭೆಯನ್ನು ಮಾಡಿಕೋ !" ರಾಯರು ಮಾತನಾಡಿದರು. ಯಶೋದಮ್ಮ ನಿರುತ್ಸಾಹದ ಉಸಿರೊಂದನ್ನು ಬಿಟ್ಟರು.

"ನನಗೆ ಉಷೆಯು ಇಷ್ಟವಿಲ್ಲವೆಂದು ನಿಮಗೆ ತಿಳಿದುದಾದರೂ ಹೇಗೆ ? ಎಂತಲೇ ಉಷೆಯನ್ನು ಸುದರ್ಶನನಿಗೆ ಕೊಡಬೇಕೆಂಬ ವಿಚಾರವನ್ನು ನಡೆಯಿಸಿದ್ದೀರೋ ?"

ಯಶೋದಮ್ಮ ಗಾಬರಿಯಾಗಿ ಕೇಳಿದರು:

"ಉಷೆಯನ್ನು . . ? ಸುದರ್ಶನನಿಗೆ....? ಯಾರು ಹೇಳಿದರು ನಿನಗೆ ಇದನ್ನೆಲ್ಲಾ ?"

"ಶಾರದತ್ತೆ ನನಗೆಲ್ಲವನ್ನೂ ಹೇಳಿದ್ದಾರೆ. ಶಾಸ್ತ್ರಿಗಳ ಹೆಂಡತಿಯ ಮುಖಾಂತರವಾಗಿ ಅವರಿಗೆ ಈ ಸಂಗತಿ ಗೊತ್ತಾಯಿತಂತೆ."

"ಶುದ್ಧ ಸುಳ್ಳಿನ ಕಂತೆಯಿದು ! ಎಂತಲೇ ನೀನು ಇಷ್ಟೊಂದು ರೇಗಿಕೊಂಡಿದ್ದೀಯೋ ? ಏನಪ್ಪಾ ಗಿರಿಧರ ! ಉಷೆಯನ್ನು ನೀನು ಪ್ರೀತಿಸುತ್ತೀಯೆಂಬ ವಿಷಯ ನನಗೆ ಗೊತ್ತಿಲ್ಲವೇ ?"

"ಹಾಗಾದರೆ ಶಾರದತ್ತೆ ಹೇಳಿದ್ದೆಲ್ಲ ಸುಳ್ಳೇ ?"

"ಸಾವಿರಸಲ ಸುಳ್ಳು; ತಳಬುಡವಿಲ್ಲದ ಈ ಸುದ್ದಿ ಹೇಗೆ ಹುಟ್ಟಿತೋ ದೇವರಿಗೆ ಗೊತ್ತು !" ಯಶೋದಮ್ಮ ಹೇಳಿದರು.

ಗಿರಿಧರನಿಗೆ ಧೈರ್ಯ ಬಂದಂತಾಯಿತು. ಬಿಗಿದ ಕಂಠವು ಸಡಿಲಾಯಿತು. ಮುಖದ ಗಂಟು ಬಿಚ್ಚಿ ಅರಳಿತು. ಬೇಡಬೇಡವೆಂದು ಕೊಂಡರೂ ಮುಗುಳುನಗೆ ಮುಖದಲ್ಲಿ ಮೂಡಿತು. ಆತುರದಿಂದ ಕೇಳಿದ :

"ಈ ಸುಳ್ಳುಸುದ್ದಿ ಹುಟ್ಟುವುದಕ್ಕೆ ಕಾರಣವೇನಿರಬಹುದು ?"

“ಇನ್ನೇನೂ ಇಲ್ಲ! ಶಾರದತ್ತೆಯದೇನೋ ಕಾರ್ಯಸಾಧನೆಯು ಕಾರಣವಿರಬಹುದು!”

ಗಿರಿಧರನು ಮನದಲ್ಲಿ ಏನೇನನೋ ಗುಣಾಕಾರ ಹಾಕಿದ; ಕೊನೆಗೆ ನಿಶ್ಚಯದ ಗಡುಸಾದ ಧ್ವನಿಯಲ್ಲಿ ತಾಯಿಗೆ ಹೇಳಿದ:

“ಅಮ್ಮಾ, ಅದೆಲ್ಲವೂ ಏನೇ ಇರಲಿ! ಇಂದಿನಿಂದ ಉಷೆಯು ಸುದರ್ಶನನೊಡನೆ, ಸುದರ್ಶನನು ಉಷೆಯೊಡನೆ ಒಂದು ಮಾತನ್ನೂ ಆಡಲಾಗದು. ಎಂದಾದರೂ ಆಡಿದುದು ಕಂಡುಬಂದಲ್ಲಿ, ನಿಮಗೆ ಗಿರಿಧರನ ಮುಖವೇ ನೋಡಲಿಕ್ಕೆ ದೊರೆಯಲಿಕ್ಕಿಲ್ಲ. ಅವರಿಬ್ಬರಿಗೂ ಈ ಮಾತನ್ನು ನೀನೇ ಸ್ಪಷ್ಟವಾಗಿ ಹೇಳಿಬಿಡಬೇಕು!”

ಯಶೋದಮ್ಮ ಮಾತನಾಡದೆ, ಏನನ್ನೋ ಯೋಚಿಸುವುದರಲ್ಲಿ ಇದ್ದರ. ರಾಯರು ಹೇಳಿದರು:

“ಗಿರಿಧರನಿಗೆ ಒಪ್ಪಿಗೆಯಿಲ್ಲದಿದ್ದರೆ ಮಾಡುವುದೇನು? ಅವರಿಬ್ಬರಿಗೂ ಹೇಳಿಬಿಡು— ಆಯಿತು. ಇದರಲ್ಲಿ ಯೋಚಿಸಬೇಕಾದುದಾದರೂ ಏನು? ಗಂಡುಸರು ಹೆಂಗುಸರು ಕೂಡಿ, ಬೇಕುಬೇಕಾದಂತೆ ಮಾತನಾಡುತ್ತಿರುವುದೇನು ಒಳ್ಳೆಯದೇ?”

ಜಡವಾದ ಧ್ವನಿಯಲ್ಲಿ ಯಶೋದಮ್ಮ ಹೇಳಿದರು:

“ನಿನ್ನ ಮಾತಿನಂತೆ ಉಷೆಗೆ, ಸುದರ್ಶನನಿಗೆ ಹೇಳುತ್ತೇನೆ ಗಿರಿಧರಾ!”

ಗಿರಿಧರನ ಮನಸ್ಸಿನಲ್ಲಿ ಗೆಲವು ಹಿಡಿಸದಾಯಿತು. ದೊಡ್ಡದೊಂದು ಯುದ್ಧದಲ್ಲಿ ವಿಜಯಸಂಪಾದನೆ ಮಾಡಿದಷ್ಟು ಸಂತೋಷ ಅವನಿಗೆ. ಐದುವರೆಗಂಟೆಯಾದುದರಿಂದ ಹೊರಕ್ಕೆ ಎಲ್ಲಿಯಾದರೂ ತಿರುಗಾಡಲಿಕ್ಕೆ ಹೋಗಬೇಕೆಂದು ಹೇಳಿ, ಅಲ್ಲಿಂದ ಎದ್ದು ನಡೆದನು. ಯಶೋದಮ್ಮನ ಮನಸ್ಸನ್ನು ಸಮಾಧಾನ ದುಗುಡಗಳೆರಡೂ ಹೆಣೆದುಕೊಂಡಿದ್ದುವು. ಯಾರದೋ ಇಬ್ಬರ ನ್ಯಾಯವನ್ನು ತೀರಿಸಿ ದಣಿದ ನ್ಯಾಯಾಧೀಶನು ವಿಶ್ರಾಂತಿ ತೆಗೆದುಕೊಳ್ಳುತ್ತಿರುವ ಬಗೆಯಲ್ಲಿ, ಯಾವ ರೀತಿಯ ಯೋಚನೆಗಳಿಗೂ ಎಡೆಗೊಡದವರಾಗಿ ಅಪ್ಪಣರಾಯರು ಅಡಿಕೆಲೆಗೆ ಕೈಹಾಕಿದರು.

## ೧೫ ನೆಯ ಪರಿಚ್ಛೇದ

ಸುದರ್ಶನನು ಬಾಡಿಬಳಲಿದ ಮೊಗದವನಾಗಿ ಕುರ್ಚಿಯೊಂದರ ಮೇಲೆ ಬಿದ್ದುಕೊಂಡಿದ್ದಾನೆ; ಬಳಿಯಲ್ಲಿಯೆ ಇದ್ದ ಇನ್ನೊಂದು ಕುರ್ಚಿಯ ಮೇಲೆ ಉಷಾ ಕುಳಿತಿದ್ದಾಳೆ.

"ಸುದರ್ಶನಾ, ನಿನಗೆ ಪರೀಕ್ಷೆಯಲ್ಲಿ ಯಶಸ್ಸು ಸಿಕ್ಕಲೆ ಬಹುದು!"

"ಸಿಕ್ಕಬಹುದೆಂದು ನನಗೇನೋ ಸಂಪೂರ್ಣವಾಗಿ ನಂಬುಗೆ. ಒಂದು ಮಾತು: ಯಶಸ್ಸು ಸಿಕ್ಕಲಿ, ಸಿಕ್ಕದಿರಲಿ; ಇನ್ನು ನನ್ನ ವಿದ್ಯಾರ್ಥಿಜೀವನ ಮುಗಿದಂತಾಯಿತು!"

"ನೀನೇ ಹೇಳುತ್ತಿದ್ದೆಯಲ್ಲವೇ ಸುದರ್ಶನಾ, . . ಮನುಷ್ಯನು ಬದುಕಿರುವವರೆಗೂ ವಿದ್ಯಾರ್ಥಿಯಾಗಿರುವನೆಂದು!"

"ಅದೇನೋ ಸರಿ! ನಾನೀಗ ಹೇಳಿದುದು ಈಗಿನ ಸ್ಥೂಲಾರ್ಥದ ವಿದ್ಯಾರ್ಥಿಜೀವನದ ವಿಷಯವನ್ನು; ಇದನ್ನು....ಸಾಕುಮಾಡಬೇಕೆಂದಿದ್ದೇನೆ ಇನ್ನುಮೇಲೆ!"

"ಮಾಡಿ, ಆ ಮೇಲೆ?" ಆಶೆ-ಆತುರಗಳಿಂದ ಉಷಾ ಕೇಳಿದಳು; ಗಿರಿಧರ ನಿಟ್ಟುಸಿರಿನೊಂದಿಗೆ ಹೇಳಿದ:

"ನನ್ನ ಆ ವಿರಾಟಸಂಸಾರದ ಸೇವೆಗೆ ಸಿದ್ಧನಾಗುತ್ತೇನೆ!"

ಉಷಾ ಮಾತನೇನೂ ಆಡದೆ, ಉದ್ದವಾದ ಉಸಿರೊಂದನ್ನು ಚೆಲ್ಲಿದಳು. ಒಂದೆರಡು ನಿಮಿಷ ಸುದರ್ಶನನೂ ಮೂಕನಾಗಿದ್ದನು. ಬಳಿಕ ಬಿಗಿದುಬರುತ್ತಿರುವ ಕಂಠದಿಂದ ಒಮ್ಮೆಲೆ ಕರೆದನು: "ಉಷಾ!"

ಉಷಾ ಕೆಳಕ್ಕೆ ಮಾಡಿದ್ದ ಮುಖವನ್ನು ಮೇಲಕ್ಕೆತ್ತುತ್ತಿರುವಾಗ, ಸುದರ್ಶನನು ಕಣ್ಣೀರನ್ನು ಬೆರಳಿನಿಂದ ಮಿಡಿಯುತ್ತಿದ್ದನು. ಉಷೆಯ ಪ್ರಶ್ನೆಗೆ ಉತ್ತರವಾಗಿ ಹೇಳಿದನು:

"ಇನ್ನೇನೂ ಇಲ್ಲ; ನೀನು ಸಿರಿವಂತಿಕೆಯ ಸಂಸಾರಸೌಖ್ಯವನ್ನು ಅನುಭವಿಸುತ್ತಿರುವಾಗ, ಬಡವರನ್ನು ಕಡೆಗಣಿಸುವುದಿಲ್ಲವಷ್ಟೇ?"

ಉಷೆಯು ಉತ್ತರ ಕೊಡಬೇಕೆಂದಿರುವಷ್ಟರಲ್ಲಿಯೆ ಯಶೋದಮ್ಮನವರು ಅಲ್ಲಿಗೆ ಬಂದರು. ಬಂದವರೇ ಸುದರ್ಶನನ ಕೈಯನ್ನು ಹಿಡಿದು ನೋಡುತ್ತ ಕೇಳಿದರು :

"ಏನಪ್ಪಾ, ಈಗ ಚೆನ್ನಾಗಿದ್ದೀಯಾ ?"

"ಏನೋ, ತಕ್ಕಮಟ್ಟಿಗೆ..ಚೆನ್ನಾಗಿದ್ದೇನೆಂದು ಹೇಳಬಹುದು!"

ಯಶೋದಮ್ಮ ಉಷೆಯ ಕಡೆಗೆ ತಿರುಗಿ ಹೇಳಿದರು :

"ಉಷಾ, ನೀನು ಕೆಳಕ್ಕೆ ನಡೆಯುವಮ್ಮಾ, ಸ್ವಲ್ಪ ಕೆಲಸವಿದೆ!"

ಉಷೆಯು ಎದ್ದು ನಡೆದುಬಿಟ್ಟಳು. ಯಶೋದಮ್ಮ ಅದೇ ಕುರ್ಚಿಯಮೇಲೆ ಕುಳಿತುಕೊಂಡು, ಒಂದು ವಿಧದ ನಗೆ ನಗುತ್ತ ಮಾತನಾಡಿದರು :

"ಸುದರ್ಶನಾ, ಗಿರಿಧರನಿಗೆ ಉಷೆಯನ್ನು ತೆಗೆದುಕೊಂಡು, ಈ ಸಲ ಮದುವೆ ಮಾಡಬೇಕೆಂದಿದ್ದೇವೆ, ನಿನ್ನ ಅಭಿಪ್ರಾಯವೇನು ?"

ಕಳ್ಳನು—ತುಂಬ ಬಲಿಷ್ಠನಾದ ಕಳ್ಳನು-ಮನೆಗೆ ಬಂದಿದ್ದಾನೆ; 'ನಿನ್ನ ಮನೆಯಲ್ಲಿ ಕಳವು ಮಾಡಬೇಕೆಂದಿದ್ದೇನೆ, ನಿನ್ನ ಅಭಿಪ್ರಾಯವೇನು ?' ಎಂದು ಕೇಳುತ್ತಿರುವಾಗ, ಬಲಹೀನನು—ಆದರೆ ಸ್ವಾಭಿಮಾನಿಯು—ಆದ ಮನೆಯ ಯಜಮಾನನ ಮನಸ್ಸು ಹೇಗೆ ಆಗಬಹುದು? ಸುದರ್ಶನನ ಮನಸ್ಸೂ ಹಾಗೆಯೆ ಆಯಿತು. ಬಲವಂತದಿಂದ ಎದೆಯ ಕಲಕಾಟವನ್ನೆಲ್ಲ ಸಹನ ಮಾಡಿಕೊಂಡು, ಶಾಂತತೆಯ ಮುಸುಕು ಹಾಕಿಕೊಂಡು ಸುದರ್ಶನ ಮಾತನಾಡಿದ :

"ಇದರಲ್ಲಿ ನನ್ನ ಅಭಿಪ್ರಾಯವೇನಮ್ಮಾ? ಗಿರಿಧರನಿಗೆ ಉಷೆಯನ್ನು ಲಗ್ನವಾಗುವ ಉತ್ಕಟೇಚ್ಛೆಯಿದೆಯೆಂಬುದನ್ನು—ಆತನ ಅಭಿಪ್ರಾಯದಂತೆ—ನಿನಗೆ ಹಿಂದೆಯೆ ಮೂರುನಾಲ್ಕು ಸಲ ಹೇಳಿದ್ದೇನಲ್ಲವೇ? ಇನ್ನು ಕೇಳುವುದಿದ್ದಲ್ಲಿ ಉಷೆಯ ಅಭಿಪ್ರಾಯ ಕೇಳಬಹುದು!"

"ಅವಳನ್ನೇನು ಕೇಳುವುದು? ಗಿರಿಧರನನ್ನೇ ಮಾಡಿಕೊಳ್ಳುತ್ತೇನೆಂದು ಹೇಳಬೇಕೇ ಅವಳು! ಎಷ್ಟೇ ಹೊಸಕಾಲದವಳಾದರೂ ಹೆಣ್ಣು ಹುಡುಗಿ ಆಕೆ; ನಾಚಿಕೆಯೆನಿಸದೇ ಅವಳನ್ನು ಕೇಳಿದರೆ?"

“ನಾನು ಸುಮ್ಮನೆ ಹೇಳಿದೆ; ನಿನ್ನ ಅಭಿಪ್ರಾಯವನ್ನು ವಿಚಾರಿ- ನಡೆಯುವಳೇ ಉಷಾ..ಎಂದಾದರೂ?”

ಯಶೋದಮ್ಮ ಶೂನ್ಯಮನಸ್ಸಿನವರಾಗಿ ಹಾಗೆಯೆ ಕುಳಿತಿದ್ದರು; ಬಳಿಕ ಜಡವಾದ ದನಿಯಲ್ಲಿ ಮಾತನಾಡಿದರು:

“ಸುದರ್ಶನ, ನೀನೀಗ ಒಂದು ಕೆಲಸವನ್ನು ಮಾಡಬೇಕಾಗಿದೆ!”

“ಅದೇನಮ್ಮಾ ಕೆಲಸ?”

“ನೀನು ಗಿರಿಧರನನ್ನು ಮೊದಲಿನಿಂದಲೂ ನೋಡುತ್ತ ಬಂದಿರುತ್ತೀಯೆ. ಆತನದು ಏನೋ ಒಂದು ಹುಚ್ಚುಚ್ಚಾದ ಮನಸ್ಸೆಂಬುದನ್ನೂ ನೀನು ಬಲ್ಲೆ. ಈಗೇನೋ ನನ್ನೆದುರು ಹೇಳಿದ: ‘ಉಷೆಯು ಸುದರ್ಶನನ ಕೂಡ, ಸುದರ್ಶನನು ಉಷೆಯ ಕೂಡ ಒಂದು ಮಾತನ್ನೂ ಆಡಲಾಗದು; ಆಡಿದರೆ ಮತ್ತೊಮ್ಮೆ ನನ್ನ ಮುಖ ನಿಮಗೆ ನೋಡಲಿಕ್ಕೆ ಸಿಕ್ಕದು’ ಎಂದು. ಈಗ ನಿನಗೆ ಈ ಮಾತನ್ನು ಹೇಳಿಹೋಗಬೇಕೆಂದೇ ಇಲ್ಲಿಗೆ ಬಂದಿದ್ದೇನೆ. ಕೆಳಕ್ಕೆ ಹೋಗಿ ಉಷೆಗೂ ಈ ಸಂಗತಿಯನ್ನು ಹೇಳುತ್ತೇನೆ. ನೀನಿನ್ನು ಉಷೆಯೊಡನೆ ಮಾತನ್ನಾಡಬೇಡ!”

ಸುದರ್ಶನನ ಮುಖದ ಕಳೆಯು ಮತ್ತಿಷ್ಟು ಇಳಿದುಹೋಯಿತು. ಎದೆಯು ಅದೆಷ್ಟು ಸಿಡಿಲಿನ ಸಪ್ಪಳನ್ನು ಕೇಳಿದಷ್ಟು ಬೆದರಿತೋ ಏನೋ! ತಗ್ಗಿದ ಧ್ವನಿಯಲ್ಲಿ ಕೇಳಿದ:

“ಇದೇನಮ್ಮಾ ಹೊಸರೀತಿ? ಉಷೆಯೊಡನೆ ನಾನು ಮಾತನಾಡಕೂಡದೆ?”

ಅಪರಾಧಿನಿಯ ಸ್ವರದಲ್ಲಿ ಯಶೋದಮ್ಮ ಹೇಳಿದರು:

“ಏನೋ ಅಪ್ಪಾ, ಗಿರಿಧರನದು ಒಂದು ವಿಚಿತ್ರದ ಮನಸ್ಸು. ನಿನಗೇನು ಗೊತ್ತಿಲ್ಲವೇ? ನಮಗೆ ಮನೆತನಕ್ಕೆಲ್ಲಕ್ಕೂ ಒಬ್ಬನೇ ಒಬ್ಬ ಮಗನು ಆತ. ಆತನಿಗೆ ವಿರುದ್ಧರಾಗಿ ನಡೆಯಲಿಕ್ಕೆ ನಮಗೆ ಹೆದರಿಕೆ. ಅದೇನೇ ಇರಲಿ, ನೀನು ಮಾತ್ರ ಉಷೆಯೊಡನೆ ಮಾತನಾಡಬೇಡ–ಆಯಿತು.”

ಅಲ್ಲಿ ಬಹಳ ಹೊತ್ತು ಕುಳಿತುಕೊಂಡಿರುವುದಕ್ಕೆ ನಾಚಿಕೆಯೆನಿಸಿತೇನೋ! ಯಶೋದಮ್ಮ ಕೂಡಲೆ ಎದ್ದು ನಡೆದೇ ಬಿಟ್ಟರು. ಸುದರ್ಶನ

ಎದ್ದು ಕುಳಿತಿದ್ದವನು ಮತ್ತೆ ಕುರ್ಚಿಯಮೇಲೆ ಬಿದ್ದುಕೊಂಡು ಯೋಚಿಸುತ್ತಿದ್ದ;

"ಪರವಶತೆಯ ಹಣೆಯಬರೆಹವೇ ಇಷ್ಟು. ಭರತಖಂಡದ ಪ್ರಜೆಗಳೆಲ್ಲ ಅನುಭವಿಸುತ್ತಿದ್ದುದು ಅದರ ವಿಶಾಲ ಕಾರ್ಯಕ್ಷೇತ್ರದಲ್ಲಿಯ ಕಟುಫಲಗಳನ್ನು! ನಾನಿಲ್ಲಿ ಈಗ ಅನುಭವಿಸುತ್ತಿದ್ದುದು ಅದರ ಸಂಕುಚಿತ ಕಾರ್ಯಕ್ಷೇತ್ರದಲ್ಲಿ ಬೆಳೆದ ಕಹಿಗಾಯಿಗಳನ್ನು! ದೊಡ್ಡದಾಗಿರಲಿ ಚಿಕ್ಕವಾಗಿರಲಿ, ಬೇವಿನಕಾಯನ್ನು ಕಚ್ಚಿದರೆ ಬಾಯಿ ಕಹಿಯಾಗಬೇಕಾದುದು ಸಹಜವೆ! ಭಾರತೀಯರ ಭವ್ಯ ಪರವಶತೆಯನ್ನು ಹಾರಿಸಿಬಿಡಬೇಕೆಂದು ಹಗಲಿರುಳೂ ಹಂಬಲಿಸುತ್ತಿರುವ ನಾನು, ನನ್ನನ್ನು ನಾನೇ—ಇನ್ನೂ ಇನ್ನೂ—ಈ ಚಿನ್ನದ ಪಂಜರದಲ್ಲಿ ಕೊಳೆಯಗೊಡಲೇ? ಹಂಗಿನರಮನೆಗಿಂತ ಪಿಂಗಡದ ಗುಡಿಲೇಸು!"

ಕೊನೆಯ ಈ ಸರ್ವಜ್ಞನ ವಚನವನ್ನು ಸುದರ್ಶನನು ಗಟ್ಟಿಯಾಗಿಯೇ ನುಡಿದುಬಿಟ್ಟ. ನರನರಗಳೂ ವೀಣೆಯ ತಂತಿಗಳಂತೆ ಮರಳಿ ಮರಳಿ ಈ ವಚನವನ್ನು ನುಡಿದು, ಆತನನ್ನು ಆವೇಶಗೊಳಿಸುತ್ತಲಿದ್ದುವು.

---

## ೧೬ ನೆಯ ಪರಿಚ್ಛೇದ

ಉಷೆಯು ಕೆಳಕ್ಕಿಳಿದು ಬಂದು, ತನ್ನ ಕಿರುಮನೆಯಲ್ಲಿ ಕುಳಿತಳು. ಸುದರ್ಶನನಿಗೆ ಮೈಯ ಬೇನೆಯಿಲ್ಲ, ಮನದಬೇನೆಯೆಂಬುದನ್ನವಳು ಪೂರ್ಣವಾಗಿ ಕಂಡುಕೊಂಡು ಬಿಟ್ಟಿದ್ದಳು. ಈ ಬೇನೆಯು ಇದ್ದಕ್ಕಿದ್ದ ಹಾಗೆಯೆ ಇಷ್ಟೊಂದು ಬಳೆಯುವುದಕ್ಕೆ ಅದೇನು ಕಾರಣವೋ—ಎಂಬುದನ್ನು ಯೋಚಿಸಿ ಬಗೆಹರಿಯದವಳಾದಳು. ಈ ಬೇನೆಯು ಯಾವ ರೀತಿಯಲ್ಲಿ ಪರಿಣಮಿಸುವುದೋ..ಎಂಬ ವಿಚಾರವು ಅವಳ ಕರುಳನ್ನು ಸಾವಿರಾರು ಸೂಜಿಗಳಿಂದ ಚುಚ್ಚುತ್ತಿದ್ದಿತು. ಒಕ್ಕಲಗಿತ್ತಿ ಬಂದು, ಯಾವಾಗ ದೀಪವನ್ನು ಅಂಟಿಸಿಹೋದಳೆಂಬುದರ ಅರಿವು ಕೂಡ ಇಲ್ಲದಷ್ಟು ಉಷೆಯ ಮನಸ್ಸು ವಿಚಾರವಶವಾಗಿದ್ದಿತು.

"ನಾನೀಗ ಏನು ಮಾಡಬೇಕು? ಯಾರೆದುರು ನನ್ನ ಹೃದಯ ವನ್ನು ಬಿಚ್ಚಿ ಇಡಬೇಕು?" ಎಂಬ ವಿಚಾರವು ಬಂದು, ಉಷೆಗೆ ಅಗಲಿ ಹೋದ ತಾಯಿಯ ಜ್ಞಾಪಕವಾಯಿತು. ದುಃಖವು ಉಕ್ಕೇರಿ ಕಣ್ಣೀರು ಹರಿಯಿತು.

"ತಾಯಿಯಿದ್ದರೆ ನಾನೆಷ್ಟು ಸ್ವತಂತ್ರಳಾಗಿರುತ್ತಿದ್ದೆ, ಸುಖಿ ಯಾಗಿ ಇರುತ್ತಿದ್ದೆ! ಚಿನ್ನದ ಪಂಜರದಲ್ಲಿ ಬಂಧಿಸಿಟ್ಟಿದ್ದ ಪಕ್ಷಿ ನಾನು! ನನ್ನ ಹೃದಯವನ್ನೇ ನಾನು ತುಳಿದು ಮೆಟ್ಟಬೇಕಾಗಿದೆ! ಹೆಂಗುಸು ನಾನು; ಏನಾದರೂ ಸ್ಪಷ್ಟವಾಗಿ ಮಾತುಗಳನ್ನಾಡಬೇಕೆಂದರೆ, ತಾಯಿಯ ಕರುಳು ಇಲ್ಲದಲ್ಲಿ 'ನಾಚಿಕೆಗೇಡಿ' ಎಂಬ ಪದವಿಯನ್ನು ಪಡೆಯಬೇಕಾಗುವುದು. ಸುದರ್ಶನನ ಮುಂದೆಯೆ ನನ್ನ ಹೃದ್ಗತವನ್ನು ಬಿಚ್ಚಿ ಹೇಳಬೇಕೆಂದರೆ, ಯಾರೋ ನಾಲಗೆಯನ್ನು ಜಗ್ಗಿ ಹಿಡಿದು ನಿಲ್ಲಿಸಿ ದಂತಾಗುವುದು; ಎದೆಯು ದಡಗುಟ್ಟಿ ನಡುಗುವುದು. ಆತನೆದುರಿಗೆ ನನ್ನ ಅಭಿಪ್ರಾಯವನ್ನು ಬಾಯಿಬಿಟ್ಟು ಆಡಿದರೆ, ಆತನು ನನ್ನ ವಿಷಯದಲ್ಲಿ ವಿಪರೀತ ಅಭಿಪ್ರಾಯವನ್ನೇನೂ ಮಾಡಿಕೊಳ್ಳಲಿಕ್ಕಿಲ್ಲವಷ್ಟೇ? ಮಾಡಿ ಕೊಳ್ಳಲಾರನೆಂದು ನನಗೇನೋ ತುಂಬಾ ಭರವಸೆ. ಆದರೆ ಅವನಾದರೂ ಈಗ ಮಾಡಬೇಕೇನು? ಇನ್ನೊಬ್ಬರ ಋಣದಿಂದ ಬದ್ಧನಾದವನು. ಏನೆ ಆಗಲಿ; ನಾಳೆಯ ದಿನ ಗಟ್ಟಿ ಮನಸ್ಸನ್ನು ಮಾಡಿ, ಸುದರ್ಶನನಿಗೆ ಏನೆಲ್ಲ ಹೇಳಿಬಿಡುತ್ತೇನೆ."

ಯೋಚನಾಲೋಕದಲ್ಲಿ ಕುಳಿತ ಉಷೆಯ ಮನಸ್ಸು ಇನ್ನೂ ಏನೇನನೋ ಜಿನುಗಿಯೇ ಜಿನುಗುತ್ತಿದ್ದಿತು. ಯಶೋದಮ್ಮ ಒಳಕ್ಕೆ ಬಂದರು. ಅವರ 'ಉಷಾ' ಎಂಬ ಕೂಗಿನಿಂದ ಉಷೆಯು ಹಾರಿ ಬಿದ್ದಳು. ಜಡವಾದ ದನಿಯಲ್ಲಿ 'ಏನು?.. ಬಾರಮ್ಮಾ!..' ಎಂದು ನುಡಿದಳು. ಯಶೋದಮ್ಮನ ದೃಷ್ಟಿ ಕೊಂಚ ಮಂದವಾಗಿರದಿದ್ದರೆ, ಉಷೆಯ ಕಂಬನಿಗಳು ಅವರ ಕಣ್ಣಿಗೆ ಬೀಳದಿರುತ್ತಿರಲಿಲ್ಲ. ಆದರೂ ಮುಖವನ್ನೆಲ್ಲ ಒರಸಿಕೊಳ್ಳುವ ನೆಪದಿಂದ ಆಕೆ, ಸೆರಗಿನಿಂದ—ಉಪಾಯ ವಾಗಿ— ಕಂಬನಿಗಳನ್ನು ಒರಸಿಕೊಂಡಳು. ಯಶೋದಮ್ಮ ಬೆದರು ದನಿಯಲ್ಲಿ ನುಡಿದರು:

"ಉಷಾ, ನಿನಗೀಗ ಒಂದು ಮಾತನ್ನು ಹೇಳಬೇಕಾಗಿದೆ!"

"ಅದೇನವ್ಮಾ?"

"ಇನ್ನೇನೂ ಇಲ್ಲ, ನೀನು ಯಾರ ಕೈಯನ್ನು ಹಿಡಿಯುವವ ಳಿದ್ದೀಯೆಂಬುದನ್ನು ಬಲ್ಲೆಯಷ್ಟೆ?...."

ಉಷೆಯು ಮಾತನಾಡದೆ ಮುಖತಗ್ಗಿಸಿದಳು. ಯಶೋದಮ್ಮ ನುಡಿದರು :

"ನಾಚಿಕೆಯೇತಕ್ಕೆ ಬಿಡಮ್ಮಾ ಅಷ್ಟು! ಗಿರಿಧರನೇನು ಹೊರಗಿ ನವನೇ ನಿನಗೆ? ನೋಡು ಉಷಾ, ನಿನ್ನ ಗುರು ಸುದರ್ಶನ, ಆಗಾಗ ನನ್ನೆದುರು ಹೇಳುತ್ತಿದ್ದ: ಗಿರಿಧರನು ನಿನ್ನನ್ನು ತುಂಬಾ ಪ್ರೀತಿಸುತ್ತಿದ್ದಾ ನಂತೆ. ನಿನ್ನ ಹೊರತು ಬೇರೆಯವರನ್ನು ಲಗ್ನವಾಗುವುದಕ್ಕೆ ಆತನಿಗೆ ಇಷ್ಟವೇ ಇಲ್ಲವಂತೆ."

ಉಷೆಯ ತಲೆ ಇನ್ನಿಷ್ಟು ಬಗ್ಗಿತು. ಮುಖವು ಮೂಕತನವನ್ನೇ ವಹಿಸಿದ್ದಿತು. ಆದರೆ ಕಸುವಿನಿಂದ ನುಗ್ಗಿಕೊಂಡು ಬರುತ್ತಿರುವ ನಿಡಿ ದಾದ ಉಸಿರನ್ನು, ಉಷೆಯು ಪ್ರಯತ್ನಪೂರ್ವಕವಾಗಿ ತುಂಡುತುಂಡು ಮಾಡಿ ಹೊರಕ್ಕೆ ಹಾಕಿದಳು. ಯಶೋದಮ್ಮ ಮತ್ತೆ ಹೇಳಿದರು :

"ನೋಡು ಉಷಾ, ಗಿರಿಧರನು ನಿನ್ನನ್ನು ಇಷ್ಟು ಪ್ರೀತಿಸುವ ನಾದರೂ ಆತನದು ಒಂದು ವಿಧದ ಮನಸ್ಸು. ಆತನ ಹೆಂಡತಿಯಾಗು ವಾಕೆ ನೀನು. ತನ್ನ ಹೆಂಡತಿಯಾಗುವವಳು ಇನ್ನೊಬ್ಬ ಗಂಡುಸಿನ ಕೂಡ ಮಾತನಾಡಬಾರದೆಂದು ಗಿರಿಧರನ ಅಪೇಕ್ಷೆ. ನೀನು ಆತನ ಮನಸ್ಸಿಗೆ ವಿರುದ್ಧಳಾಗಿ ನಡೆಯಬೇಡ; ತಿಳಿಯಿತೇನು? ನೀನಾದರೂ ಇನ್ನಾವ ಗಂಡುಸರ ಕೂಡ ಮಾತನಾಡುತ್ತೀಯೆ? ತಿರುಗಿ ಮುರುಗಿ ಸುದರ್ಶನನ ಜೊತೆಯಲ್ಲಿ...."

ಉಷೆಯು ಕದಲದೆ, ಕುಳಿತ ಭಂಗಿಯಲ್ಲಿಯೆ ಕುಳಿತಿದ್ದಳು.

"ನನ್ನ ಮುಂದೆ ಎಂತಹ ನಾಚಿಕೆಯೆ? ನಿನ್ನ ತಾಯಿಯಿದ್ದರೆ ಅವಳೆದುರೂ ಇಷ್ಟೊಂದು ನಾಚುತ್ತಿದ್ದೆಯೇನು? ನಾನು ಹೇಳುವುದು ನಿನಗೆ ತಿಳಿಯಿತೇ ಉಷಾ? ಗಿರಿಧರನ ಮನಸ್ಸಿನ ಸಂಶಯವು ಅದೇನೋ

ಕಾಣೆ; ನೀನು ಸುದರ್ಶನನೊಡನೆಯೂ ಮಾತನಾಡಕೂಡದಂತೆ. ಆತನ ಮನಸ್ಸಿನಂತೆ ವರ್ತಿಸುತ್ತಿರು ಆಯಿತು. ಇಂದು ಬೆಳಗಿನಲ್ಲಿ ಸುದರ್ಶನನು ನಿನ್ನ ಕೈಯನ್ನು ಹಿಡಿದುಕೊಂಡು ಮಲಗಿದುದನ್ನು ನಾನು ನೋಡಿದೆ. ಅದು ಗಿರಿಧರನ ಕಣ್ಣಿಗೆ ಬಿದ್ದಿದ್ದರೆ ಏನೇನು ರಾಮಾಯಣ ಮಾಡಿಬಿಡುತ್ತಿದ್ದನೋ!''

ಈ ಸಲ ಎಷ್ಟು ತಡೆದರೂ ಕೇಳದೆ, ಉಷೆಯ ಮುಖದಿಂದ ಬಿಸಿಯುಸಿರೊಂದು ಹೊರಬಿದ್ದಿತು.

''ನನ್ನದೇನೂ ವಿಪರೀತ ಭಾವನೆಯಿಲ್ಲವಮ್ಮಾ ಉಷಾ! ಸುದರ್ಶನ ನೇನು ಹೊರಗಿನವನೇ? ಗಿರಿಧರನ ಜೊತೆಯಲ್ಲಿಯೇ ಅವನನ್ನೂ ಸಾಕಿ ಸಲಹಿದ್ದೇನೆ. ಆದರೂ ನೀನು ಎಚ್ಚರಿಕೆಯಿಂದಿರು; ಗಿರಿಧರನ ಸ್ವಭಾವ ಮಹಾ ವಿಲಕ್ಷಣ!''

ಉಷೆಯ ತಗ್ಗಿದ ತಲೆಯು, ಕಳವಳದ ಮುದ್ರೆಯೊಂದಿಗೆ ನಸು ನೇರವಾಗಿ ನಿಂತಿತು.

''ಗಿರಿಧರನೆದುರಿಗೆ ಈ ಮಾತನ್ನು ನಾನೆಂದೂ ಹೇಳುವುದಿಲ್ಲ. ನೀನು ನಿಶ್ಚಿಂತೆಯಿಂದಿರು. ಆದರೆ ಸುದರ್ಶನನ ಕೂಡ ಇನ್ನು ಮೇಲೆ ಒಂದು ಮಾತನ್ನೂ ಆಡಲಾಗದು, ತಿಳಿಯಿತೇನು?''

ಅಪ್ಪಣರಾಯರು ಕರೆದ ಕೂಗು ಕೇಳಿದುದರಿಂದ, ಯಶೋದಮ್ಮ ಉಷೆಗೆ ಜಾಗ್ರತೆಯಿಂದಿರುವಂತೆ ಮತ್ತೊಮ್ಮೆ ಹೇಳಿ ಹೊರಟು ನಡೆದರು. ಮರಳಿ ಯಶೋದಮ್ಮನವರೇ ಬಂದು ಊಟಕ್ಕೇಳೆಂದು ಒತ್ತಾಯಪಡಿಸುವವರೆಗೂ ಉಷೆಯು ಮಂತ್ರಮುಗ್ಧಳಂತೆ ಮರವಟ್ಟು ಹಾಗೆಯೆ ಕುಳಿತುಬಿಟ್ಟಿದ್ದಳು. ಆಗಿನ ಅವಳ ಚಲನೆಗಳು ಯಶೋದಮ್ಮನಿಗೆ ಕಂಡರೂ ಅವಕ್ಕೆ ಅವರು ಬೇರೆ ಯಾವುದಾದರೊಂದು ಅರ್ಥವನ್ನು ಕಲ್ಪಿಸಿರಬಹುದು.

---

## ೧೭ ನೆಯ ಪರಿಚ್ಛೇದ

ಯಶೋದಮ್ಮ ಅಡಿಗೆಯುವನನ್ನು ಕೂಗಿ ಹೇಳಿದರು:

"ಎಂಟುಗಂಟೆಯಾಯಿತು, ಸುದರ್ಶನ ಇದುವರೆಗೂ ಏಳಲಿಲ್ಲ ವೇತಕ್ಕೋ! ಎಲ್ಲರದೂ ಕಾಫಿ-ತಿಂಡಿಯಾಯಿತು. ಎಂದೂ ಮಲಗದವನು— ಅದೇನೋ ಇಂದು ಇಷ್ಟೊಂದು ಹೊತ್ತು ಮಲಗಿದ್ದಾನೆ. ಮೇಲೆ ಹೋಗಿ ಆತನನ್ನು ಎಬ್ಬಿಸಿಯಾದರೂ ಎಬ್ಬಿಸಪ್ಪಾ!"

ಅಡಿಗೆಯುವನು ಅಟ್ಟದ ಮೇಲೆ ಬಂದ. ಸುದರ್ಶನನ ಮಲಗುಮನೆಯ ಬಾಗಿಲು ಮುಚ್ಚಿದ್ದಿತು. ಹೊರಕ್ಕೆ ನಿಂತುಕೊಂಡೇ ಕೂಗಿದ:

"ರಾಯರs! ರಾಯರs!"

ಒಳಗಿನಿಂದ ಉತ್ತರವೇನೂ ಬಾರದುದರಿಂದ "ರಾಯರs!" ಎಂದು ಗಟ್ಟಿಯಾಗಿ ಕೂಗುತ್ತ ಬಾಗಿಲನ್ನು ತಟ್ಟಿದ. ಒಳಕ್ಕೆ ಅಗಣಿಹಾಕದೆ ಇದ್ದುದರಿಂದ ಬಾಗಿಲು ತೆರೆಯಿತು. ಅಡಿಗೆಯುವನು ಒಳಕ್ಕೆ ಹೋಗಿ ನೋಡಿದನು. ಸುದರ್ಶನನು ಇಲ್ಲವೇ ಇಲ್ಲ. ಹಾಸಿದ ಹಾಸಿಗೆ ಹಾಗೆಯೇ ಬಿದ್ದಿದೆ. ಉಳಿದ ಎಲ್ಲ ಪದಾರ್ಥಗಳೂ ತಮ್ಮ ತಮ್ಮ ಸ್ಥಳಗಳಲ್ಲಿ ಇದ್ದಂತೆಯೇ ಇವೆ. ಚಿಕ್ಕದನ್ನಾಗಿ ಮಾಡಿಟ್ಟಿದ್ದ ದೀವಿಗೆಯು ದರಿದ್ರನಾದ ಪಂಡಿತನ ಮುಖದಂತೆ—ತೇಜೋಹೀನವಾಗಿ ಉರಿಯುತ್ತಲಿದೆ. ನಿಂತುಕೊಂಡು ಎಲ್ಲವನ್ನೂ ನೋಡಿದ; ಬಳಿಕ ನಿಧಾನವಾದ ನಡಿಗೆಯಲ್ಲಿಯೇ ಅಟ್ಟವನ್ನಿಳಿದು, ಯಶೋದಮ್ಮನ ಬಳಿಗೆ ಬಂದು ಹೇಳಿದ:

"ಸುದರ್ಶನರಾಯರು ತಮ್ಮ ಕೋಣ್ಯಾಗ ಇಲ್ಲರವ್ವಾ?"

"ಏನು? ಕೋಣೆಯಲ್ಲಿ ಇಲ್ಲವೇ?"

"ಇಲ್ಲ ತಾಯಿಾ! ಹಾಸಿದ್ದ ಹಾಸಿಗಿ ಮಾತ್ರ ಹಾಂಗs ಅದೆ; ರಾಯರು ಇಲ್ಲೇ ಇಲ್ಲ!"

ಯಶೋದಮ್ಮನ ಎದೆಯು ದಡಗುಟ್ಟಿ ನಡುಗಿತು.

" ಇದೇನು ಮಾತೋ ! ಅಲ್ಲಿಯಲ್ಲದೆ ಮತ್ತೆಲ್ಲಿಗೆ ಹೋಗುತ್ತಾನೆ? ಬೆಳಗಿನಲ್ಲಿ ಆವನು ಎದ್ದು ಅಟ್ಟವನ್ನಿಳಿದು ಬಂದುದಂತೂ ಇಲ್ಲ. ಅದು ಹೇಗೆ ನೋಡಿಬಂದೆಯೊ ನೀನು ! "

ಎಂದು ನುಡಿದು, ಯಶೋದಮ್ಮನವರೇ ಉಪ್ಪರಿಗೆಯ ಮೆಟ್ಟಿಲನ್ನೇರಲು ತೊಡಗಿದರು. ಮೇಲೆ ಹೋಗಿ, ಸುದರ್ಶನನು ಮಲಗಿಕೊಂಡಲ್ಲಿಗೆ ಬಂದು ನೋಡಿದರು. ಅಲ್ಲಿ ಇದ್ದರೆ ಕಣ್ಣಿಗೆ ಬಿದ್ದಾನು. ಯಶೋದಮ್ಮನ ಮನಸ್ಸು ವಿಪರೀತ ಗೊಂದಲದಲ್ಲಿ ಬಿದ್ದುಬಿಟ್ಟಿತು.

" ಈತ ಹೋದನಾದರೂ ಎಲ್ಲಿಗೆ? ಡಾಕ್ಟರಿಗೆ ಪ್ರಕೃತಿ ತೋರಿಸಲಿಕ್ಕೆ ಪಟ್ಟಣದ ಕಡೆಗೆ ಹೋಗಿದ್ದಾನೇನು? ಆದರೆ ಆತನ ಸೈಕಲ್ಲು ಕೆಳಕ್ಕೇ ಇಟ್ಟಿರುವುದಲ್ಲ ! " ಎಂದು ತಮ್ಮೊಳಗೆ ತಾವೇ ನುಡಿಯುತ್ತ, ಹುಚ್ಚುಗಣ್ಣುಗಳಿಂದ ಸುತ್ತುಮುತ್ತಲೂ ನೋಡಲಿಕ್ಕೆ ಮೊದಲು ಮಾಡಿದರು. ನಡುಹಾಸಿಗೆಯ ಮೇಲೆ ಕಟ್ಟೋಲೆ (ಕವ್ಹರ್) ಯೊಂದು ಕಾಣಿಸಿತು. ಅದನ್ನು ಕೈಯಲ್ಲಿ ತೆಗೆದುಕೊಂಡು, ಮೇಲಿನ ಹೆಸರನ್ನು ಓದಿ ನೋಡಿದರು; ಅಪ್ಪಣರಾಯರ ಹೆಸರಿದ್ದಿತು. ಅನೇಕ ಸಲ ನೋಡಿದ ಪರಿಚಯದಿಂದ, ವಿಳಾಸವನ್ನು ಬರೆದ ಅಕ್ಷರಗಳು ಸುದರ್ಶನನವೆಂಬುದನ್ನು ಕಂಡುಕೊಂಡರು. ಅವಸರವಸರದಿಂದ ಅಟ್ಟವನ್ನಿಳಿದು ರಾಯರು ಕುಳಿತಲ್ಲಿಗೆ ಬಂದರು. ಗಿರಿಧರನಾಗ ಮನೆಯಲ್ಲಿಥಲಿಲ್ಲ. ಉಷೆಯು ಬೆಳಗಿನ ತನ್ನ ಕೆಲಸವನ್ನು ತೀರಿಸಿಕೊಂಡು, ತನ್ನ ಕಿರುಮನೆಯನ್ನು ಸೇರಿಕೊಂಡಿದ್ದಳು. ರಾಯರು ಅಡಿಕೆಲೆಯ ಡಬ್ಬಿಯನ್ನು ಮುಂದಿಟ್ಟುಕೊಂಡು, ಬೆಳ್ಳಿಕೋಟೆಯಲ್ಲಿ ತಾವು ಕಳೆದ ಜೀವನಕ್ಕೂ ಇಲ್ಲಿ ಕಳೆಯುತ್ತಿರುವ ಜೀವನಕ್ಕೂ ತೂಕಹಚ್ಚಿ ನೋಡುತ್ತ ಕುಳಿತಿದ್ದರು. ಯಶೋದಮ್ಮ ಗಾಬರಿಯ ಧ್ವನಿಯಲ್ಲಿ ಕೇಳಿದರು :

" ಅಲ್ಲಾ, ಸುದರ್ಶನನು ಕೆಳಕ್ಕೆ ಇಳಿದು ಬಂದುದನ್ನು ನೀವು ನೋಡಿದಿರೇನು ?"

" ಇಲ್ಲ, ನಾನೇನೂ ನೋಡಿಲ್ಲ ! ಯಾಕೆ ? "

"ಸುದರ್ಶನ ಮನೆಯಲ್ಲಿ ಇಲ್ಲವೇ ಇಲ್ಲ; ಎಲ್ಲಿಗೆ ಹೋಗಿದ್ದಾನೊ ! "

ಬಳಿಯಲ್ಲಿಯೆ ಇದ್ದು ಯಾವುದೊ ಕೆಲಸಮಾಡುತ್ತಿದ್ದ ಆಳು–ಮಲ್ಲ ಹೇಳಿದ:

"ನಿನ್ನೆ ರಾತ್ರಿ ೧೦ ಗಂಟೇಕ್ಕ ನಾಟಕ ನೋಡಲಿಕ್ಕಂತ ಹೋದರು. ತಾವು ಹೋದದ್ದನ್ನ ಇನ್ನ್ಯಾರ ಮುಂದೂ ಹೇಳಬ್ಯಾಡಾ– ಅಂತ ಹೇಳಿದರು. ನಾಟಕ ನೋಡಿ ಇನ್ನೂ ತಿರಿಗಿ ಬಂದಿಲ್ಲೇನು ತಾಯಿಾ?"

ಯಶೋದಮ್ಮ, ರಾಯರು ಬೆರಗಾದವರಾಗಿ, ಮಲ್ಲನ ಮಾತನ್ನು ಕೇಳಿದರು; ಬಳಿಕ ಕಳವಳದ ಧ್ವನಿಯಲ್ಲಿ ಯಶೋದಮ್ಮ ಹೇಳಿದರು:

"ನಮಗೆ ಹೇಳದೆ ಎಂದಾದರೂ ಅವನು ನಾಟಕಕ್ಕೆ ಹೋಗುತ್ತಾನೇನೋ!"

"ಇಲ್ಲ ತಾಯಿಾ, ಸುಳ್ಳಲ್ಲ! ಅವರು ಹೋದವ್ಯಾಲ ತಲೆಬಾಗಿಲಾ ಇಕ್ಕಿ, ನಾನು ಮಲಕೊಂಡೆ!"

"ಹಾಗಾದರೆ ಇದುವರೆಗೆ ಬಂದಿಲ್ಲವೇಕೊ ಅವನು! ಇದು ನೋಡಿರಿ, ಸುದರ್ಶನ ಮಲಗಿಕೊಂಡ ಹಾಸಿಗೆಯ ಮೇಲೆ ಈ ಕಾಗದ ಇದ್ದಿತು; ಮೇಲೆ ನಿಮ್ಮ ಹೆಸರಿದೆ. ಸುದರ್ಶನನ ಅಕ್ಷರಗಳಲ್ಲವೆ ಇವು?"

ಯಶೋದಮ್ಮ ರಾಯರ ಕೈಯಲ್ಲಿ ಕಾಗದವನ್ನು ಕೊಟ್ಟರು. ರಾಯರು ಕನ್ನಡಕವನ್ನು ತೆಗೆದು ಮೂಗಿನ ಮೇಲೆ ಇಟ್ಟುಕೊಂಡು, ಹಾಗೊಮ್ಮೆ ಹೀಗೊಮ್ಮೆ ಕಾಗದವನ್ನು ಹೊರಳಿಸಿ ನೋಡಿದರು:

"ಇವು ಸುದರ್ಶನನ ಅಕ್ಷರಗಳೇ ಅಹುದು. ಹೊಸತಾಗಿಯೆ ಬರೆದ ಕಾಗದವೆಂದು ತೋರುತ್ತದೆ. ಇದನ್ನೇತಕ್ಕೆ ಬರೆದಿದ್ದಾನೊ!" ಎನ್ನುತ್ತ, ಒಳಗಿನ ಕಾಗದದ ಮಡಿಕೆಯನ್ನು ಬಿಚ್ಚಿ, ಕ–ಮ, ಕ-ಮ, ಎಂದು ತಡೆತಡೆಯುತ್ತ ಗಟ್ಟಿಯಾಗಿಯೆ ಅದನ್ನು ಓದಲು ತೊಡಗಿದರು:

**"ಹಿರಿಯರ ಚರಣಗಳೆಡೆಯಲ್ಲಿ ಅನಂತ ವಂದನೆಗಳು.**

**ಇಷ್ಟು ದಿನ ಮಗನ ಮಮತೆಯಿಂದ ಪರಿಪೋಷಿಸಿ, ವಿದ್ಯಾವ್ಯಾಸಂಗವನ್ನು ಮಾಡಿಸಿದ ತಮ್ಮ ಋಣವನ್ನು ತೀರಿಸುವುದಕ್ಕೆ ಹತಭಾಗಿಯಾದ ನನ್ನಿಂದ ಸಾಧ್ಯವುಂಟೇ? ತಮ್ಮ ಔದಾರ್ಯದಿಂದ ಬೆಳೆದ ಈ ದೇಹವನ್ನು**

ಲೋಕಸೇವೆಯ ಕಾರ್ಯದಲ್ಲಿ ವಿನಿಯೋಗಿಸಿ, ತಮ್ಮ ಅನ್ನ-ನೀರುಗಳನ್ನು ಸಾರ್ಥಕಗೊಳಿಸಬೇಕೆಂದು ನನ್ನ ಅಪೇಕ್ಷೆ.

ನನ್ನ ದೇಹದ ಹೊರತು, ನನ್ನದೆಂದು ಹೇಳುವ ಅಭಿಮಾನದ ವಸ್ತುವು ಜಗತ್ತಿನಲ್ಲಿ ಇನ್ನಾವುದೂ ಇಲ್ಲ; ಇಷ್ಟೇ ಅಲ್ಲ, ಇದನ್ನು ಕೂಡ ನನ್ನದೆಂದು ಹೇಳಬಹುದೋ ಇಲ್ಲವೋ—ಎಂದು ಒಮ್ಮೊಮ್ಮೆ ಸಂಶಯ ಬರುತ್ತದೆ. ಏನೇ ಇರಲಿ; ಹುಟ್ಟಿಬೆಳೆದುದರ ಉಪಯೋಗವನ್ನು ಉಚಿತ-ರೀತಿಯಲ್ಲಿ ಮಾಡಬೇಕೆಂದು, ನಾನೀಗ ತಮ್ಮನ್ನು ಅಗಲಿ ಹೋಗುವಂತಹ ಅಸಹನೀಯ ಪ್ರಸಂಗವನ್ನು ತಂದೊಡ್ಡಿಕೊಂಡಿದ್ದೇನೆ. ತಮ್ಮ ಹಾಗೂ ತಾಯಿ ಯಶೋದಮ್ಮನವರ ಮಮತೆಯು, ಹೊರಟುನಿಂತಿರುವ ನನ್ನ ಹೃದಯವನ್ನು ಆಗಾಗ ತಡೆದು ಹಿಡಿಯುತ್ತಲಿದೆ; ಆದರೆ ಮುಂದಕ್ಕೆ ನೂಕುತ್ತಿರುವ ಕರ್ತವ್ಯಬುದ್ಧಿಯ ಶಕ್ತಿ ಬಲಿಷ್ಠವಾಗಿದೆ. ನಾನು ಹೇಳದೆ ಕೇಳದೆ ಹೊರಟುಹೋದೆನೆಂದು ತಾವು ಮನಸ್ತಾಪವನ್ನೇನೂ ಮಾಡಿಕೊಳ್ಳ-ಕೂಡದು; ವಿಪರೀತವೇನನ್ನೂ ಭಾವಿಸಲಾಗದು. ಕರ್ತವ್ಯಪಾಲನೆಗಾಗಿ ಕಷ್ಟವನ್ನು ಸಹಿಸುವಂತಹ ಶಕ್ತಿಯು ನನ್ನಲ್ಲಿ ಉದಯಿಸುವಂತೆ, ನನಗೆ ದಿನದಿನವೂ ತುಂಬುಹೃದಯದಿಂದ ತಾವು ಹರಕೆಯನ್ನು ಕೊಡುತ್ತಿದ್ದರೆ ಖಂಡಿತವಾಗಿಯೂ ನಾನು ಭಾಗ್ಯಶಾಲಿ.

ಅದೇನೋ, ಮೊದಲಿನಿಂದಲೂ ಉಷೆಯಮೇಲೆ ನನ್ನ ಮಮತೆಯಿದೆ. ಆಕೆಯಂತಹ ಸುಸಂಸ್ಕೃತವಾದ ಮನಸ್ಸು, ಸವಿಮರ್ಶಕವಾದ ಬುದ್ಧಿ ಇನ್ನೊಬ್ಬರಲ್ಲಿ ಕ್ವಚಿತ್ತಾಗಿ ಕಂಡುಬರಬಹುದು. ನಾನು ನಿಜವಾಗಿಯೂ ಆಕೆಯ ಸದ್ಗುಣಗಳಿಗೆ ಶರಣನಾಗಿದ್ದೆನು. ಮೊಳಕೆಯೊಡೆದ ಮೋಹ-ಮಮತೆಗಳು ಮರವಾಗಿ ಬೆಳೆಯುವಾಗ, ಎಂತೆಂತಹ ವಿಕೃತಿಗಳನ್ನು ಪಡೆಯುವುವೋ—ಎಂಬುದನ್ನು ಕಂಡವರಾರು? ಅದೇನೊ, ಪರಮಾತ್ಮನು ಸರಿಯಾದ ಸಮಯಕ್ಕೆ ತನ್ನ ಸಂದೇಶವನ್ನು ನನಗೆ ಕಳುಹಿಕೊಟ್ಟ. ಮೋಹದಿಂದ ಪರಿಬಂದ ಕಣ್ಣುಗಳಿಗೆ ಹೊಸಬಗೆಯ ನೋಟವನ್ನು ನೀಡಿದ. ಕರ್ತವ್ಯಪಥದಲ್ಲಿ ಕಾಲಿಕ್ಕುವಂತಹ ಬುದ್ಧಿವಿವೇಕವನ್ನು ದಯಪಾಲಿಸಿದ. ಗಿರಿಧರನೇ ಆ ಪರಮಾತ್ಮನ ದಿವ್ಯಸಂದೇಶವನ್ನು ತಂದ ದೇವದೂತ.

ನನಗಿಂತ ಕೊಂಚ ಚಿಕ್ಕವನಾದರೂ ಆತನಿಗೆ ನನ್ನ ಪ್ರಾಣದ ಅನಂತಾನಂತ ಪ್ರಣಾಮಗಳು. ನಾನು ಹೊರಟುಹೋಗುವುದರಿಂದ ಉಷೆಗೆ ವಿಶೇಷವಾದ ಅಸಮಾಧಾನವುಂಟಾದಲ್ಲಿ, ಹಿರಿಯರಾದ ತಾವು ಹಿತವಚನಗಳನ್ನು ಹೇಳಿ ಸಂತವಿಸಬೇಕು. ಆಕೆಯು ಸುಖಸಂಸಾರದ ವಾರ್ತೆಯನ್ನು ನಾನು ಕೇಳಲು ಬಯಸುತ್ತಿರುವೆನೆಂಬುದನ್ನು, ನನ್ನ ಆ ಅನಿಮಿತ್ತ ಸಹೋದರಿಗೆ ಅಗತ್ಯವಾಗಿ ತಿಳುಹಬೇಕು.

ತಮಗೂ ಮಾತೃಶ್ರೀ ಯಶೋದಮ್ಮನವರಿಗೂ ನನ್ನ ಸಹಸ್ರ ಸಹಸ್ರ ಸಾಷ್ಟಾಂಗ ಪ್ರಣಿಪಾತಗಳು.

ತಮ್ಮ ಕೂಸು

**ಸುದರ್ಶನ ”**

ಕಾಗದ ಓದುವುದನ್ನು ಕೇಳುತ್ತಿರುವಾಗಲೆ, ಯಶೋದಮ್ಮನ ಕಳವಳವು ಕಂಬನಿಗಳನ್ನು ಹೊರಕ್ಕೆ ದೂಡುತ್ತಲಿದ್ದಿತು. ಕಾಗದ ಓದುವುದಾಯಿತು ; ದಿಙ್ಮೂಢರಾದವರಂತೆ ಯಶೋದಮ್ಮ ಕುಳಿತಲ್ಲಿಯೆ ಕುಳಿತುಬಿಟ್ಟರು.

ರಾಯರು ಉಸಿರುಹಾಕುತ್ತ ಮರುಕದ ಮಾತಿನಲ್ಲಿ ನುಡಿದರು :

“ಪಾಪ, ಒಳ್ಳೆಯ ಹುಡುಗ ! ಹೊರಟುಹೋಗಿ ಬಿಟ್ಟ. ಎಷ್ಟೊಂದು ಹೊಸ ಹೊಸ ಮಾತು ಉಪಯೋಗಿಸಿ, ಎಷ್ಟು ಚೆನ್ನಾಗಿ ಪತ್ರ ಬರೆದಿದ್ದಾನೆ ನೋಡು. ನನಗೆ ಬೇಗನೆ ಅರ್ಥವಾಗಲಿಲ್ಲ ಕೂಡ....! ನಮ್ಮ ಗಿರಿಧರನದು ವಿಚಿತ್ರವಾದ ಸ್ವಭಾವ....! ಯಾರನ್ನಾದರೂ ಹುಡುಕಲಿಕ್ಕೆ ಕಳುಹಬೇಕೆಂದರೆ ಎಲ್ಲಿಗೆಂದು ಕಳುಹಬೇಕು.........?”

## ೧೮ನೆಯ ಪರಿಚ್ಛೇದ

ನಗೆಯು ಭರತಖಂಡದ ಹಸುಮಕ್ಕಳ ಜಾತಿಗೆ ಸೇರಿದುದು. ಏತಕ್ಕೆಂದರೆ, ಅದಕ್ಕೆ ಆಯುಸ್ಸು ತೀರ ಕಡಮೆ ; ಕುತ್ತಗಳು ವಿಪರೀತ. ನಿಮಿಷಕ್ಕೆ ಮೊದಲು ಮಲ್ಲಿಗೆಯಂತೆ ಅರಳಿಕೊಂಡಿದ್ದ ನಗೆಯನ್ನು ಕೊಲೆ-

ಮಾಡಿ, ಅದರ ಸಮಾಧಿಯ ಮೇಲೆ ವ್ಯಸನವೋ, ಕ್ರೋಧವೋ, ಮತ್ಸರವೋ ಗಂಟುಮೊಗದಿಂದ ಕುಳಿತುಕೊಂಡಿರುವುದನ್ನು ಪ್ರತಿ-ನಿಮಿಷದಲ್ಲಿಯೇ ನಾವು ನೋಡುತ್ತಿರುತ್ತೇವೆ. ಬಂಜೆ ಮಗುವನ್ನು ಬಯಸುತ್ತಿರುವಂತೆ, ಮಾನವರೆಲ್ಲರೂ ನಗೆಯನ್ನು ಬಯಸುತ್ತಿರುವರು. ನಗೆ ಎಂದರೆ ಅದೊಂದು ಅಂತರಾತ್ಮನ ಆನಂದದ ಪ್ರತೀಕ. ಮಾನವರಿಗೆ ಮುಕ್ತಾವಸ್ಥೆಯಲ್ಲಿ ಆನಂದಕ್ಕೆ ಅಕ್ಷಯತೆಯುಂಟೆಂದು ಬಲ್ಲವರು ಹೇಳುತ್ತಾರೆ. ಹೀಗಿದ್ದುದೇ ನಿಜವಾದರೆ, ನಾವು ಯಾವಾಗಲೂ ನಗೆಯನ್ನು ಬಯಸುವುದೆಂದರೆ ಮುಕ್ತಾವಸ್ಥೆಯನ್ನು ಪಡೆಯಬೇಕೆಂದು ಬಯಸಿದಂತೆಯೆ ಅಲ್ಲವೇ ? ಮಾನವನ ಜೀವನದಲ್ಲಿ, ನಿತ್ಯಾನಂದಾನು-ಭವದ ಕೆಲವು ಕ್ಷಣಗಳು—ತಿಳಿಯದೆ—ಮಿಂಚಿಹೋಗುವಂತೆಯೆ, ಈ ನಗೆಯೆಂಬ ಅದರ ಬೆಳಕೂ ಆತನ ಮುಖವನ್ನು ಕೊಂಚಕಾಲ ಬೆಳಗಿ ಹೋಗುತ್ತದೆ.

ರಾಯರ ಮನೆಯು—ಇಷ್ಟುದಿನದ—ನಗೆಯಿಂದು ಮರೆಯಾಗಿ ಹೋಗಿದೆ. ಎಲ್ಲರ ಮುಖಗಳನ್ನೂ ಔದಾಸೀನ್ಯ-ವಿಷಾದಗಳು ಆವರಿಸಿ ಕೊಂಡು ಬಿಟ್ಟಿವೆ. ಮಧ್ಯಾಹ್ನದಲ್ಲಿ ಊಟಕ್ಕೆಂದು ಎಡೆಯ ಮೇಲೆ ಕುಳಿತ ಉಷೆಗೆ, ಹೊಟ್ಟೆಯಲ್ಲಿ ಎಡೆಗೊಂಡಿದ್ದ ವಿಹ್ವಲತೆಯು ಅನ್ನಕ್ಕೆ ಅನುವನ್ನೆ ಕೊಡಲಿಲ್ಲ. ರಾಯರು ಕೂಡ ಇಂದು ಭೈರವನ ಮೂರ್ತಿಯನ್ನು ಮನಸ್ಸಿನಿಂದ ಕಿತ್ತೊಗೆದು, ಚಿಂತಾದೇವತೆಯನ್ನಲ್ಲಿ ಸ್ಥಾಪಿಸಿ ಕೊಂಡಿದ್ದರು. ಸುದರ್ಶನನ ವಿಯೋಗವ್ಯಥೆಯು ಗಿರಿಧರನ ಮದುವೆಯ ಸವಿಗನಸುಗಳಿಗೆ ಮರೆಯಾಗಿ ನಿಂತುಕೊಂಡು, ಯಶೋದಮ್ಮನನ್ನು ಕಂಗೆಡಿಸಿಬಿಟ್ಟಿತು. ಕಾರಕೂನರು, ಅಡಿಗೆಯವ, ಆಳುಮಕ್ಕಳು ಎಲ್ಲರೂ ಸುದರ್ಶನನ ಗುಣಗಳನ್ನು ಕೊಂಡಾಡಿ, ತಮ್ಮ ಮನದ ಮರುಕವನ್ನು ಪ್ರದರ್ಶಿಸುವರು. ಗಿರಿಧರನ ಹೃದಯಸಾಗರವು ಮಾತ್ರ ಒಮ್ಮೆ ಆನಂದದಿಂದ ಉಕ್ಕೇರಿದಂತಾಗುವುದು ; ಇನ್ನೊಮ್ಮೆ ಅಸಮಾ-ಧಾನದ ಅಲೆಗಳಿಂದ ಉಲ್ಲೋಲ ಕಲ್ಲೋಲವಾಗುವುದು. ಮಧ್ಯಾಹ್ನ ಮಾಡಿದ್ದ ಅಡಿಗೆ ಅರ್ಧದಷ್ಟೇನೂ ತೀರಲಿಲ್ಲ. ಅಂದು ಪಾತ್ರೆಗಳನ್ನು

ತೊಳೆಯುವ ಒಕ್ಕಲಗಿತ್ತಿ, ಮಾತ್ರ ಸುದರ್ಶನನನ್ನು ಹಾಡಿ ಹರಸಿರ-ಬಹುದು. ಸುದರ್ಶನನು ಮನೆಬಿಟ್ಟ ಮೊದಲನೆಯ ದಿನವೆ ಒಂದು ಬಡ ಕುಟುಂಬವು ಹೊಟ್ಟೆತುಂಬ ಉಂಡಿತೆಂದಮೇಲೆ, ಆತನು ಪ್ರತ್ಯಕ್ಷವಾಗಿ ಕಾರ್ಯವನ್ನು ಕೈಕೊಂಡಾಗ ಅದೆಷ್ಟು ಜನರ ತೊಂದರೆಗಳನ್ನು ದೂರಮಾಡಬಲ್ಲನೊ!

ಯಾರು ನಗುತ್ತಿರಲಿ ಅಳುತ್ತಿರಲಿ; ಕಾಲರಾಯನ ಸಂದೇಶದಾಳು-ಗಳಾದ ಗಡಿಯಾರಗಳು ತಮ್ಮ ಕೆಲಸವನ್ನು ಬಿಟ್ಟು ತಡೆದು ನಿಲ್ಲುವುವೇ? ಉಷೆಯ ಕಿರುಮನೆಯ ಮೇಜಿನಮೇಲಿದ್ದ 'ಟೈಮ್ ಪೀಸೂ' ಈದಿನದ ಮೂರು ಪ್ರಹರಗಳು ಮುಗಿದುಹೋದುವೆಂಬುದನ್ನು ತೋರಿಸಿಕೊಡು-ತ್ತಿದ್ದಿತು. ಅತ್ತು ಅತ್ತು ಕೆಂಪಾದ ಕಣ್ಣುಗಳಿಂದ ಉಷೆಯು ಕುರ್ಚಿಯ ಮೇಲೆ ಬಿದ್ದುಕೊಂಡಿದ್ದಾಳೆ. ಸುದರ್ಶನನು ರಾಯರಿಗೆ ಬರೆದ ಕಾಗದವು ಆಕೆಯ ಕೈಯೊಳಗಿದೆ. ಅದನ್ನು ಈಗ ಉಷೆಯು ಓದುತ್ತಿರುವುದು ಎಷ್ಟನೆಯ ಸಲವೇನೊ! ಓದುವಳು, ಮನಸಿನಲ್ಲಿ ಏನೇನನೋ ಭಾವಿಸುವಳು. ಆ ಭಾವನೆಯ ಅನುಭಾವಗಳಾಗಿ, ಕಂಬನಿ-ಬಿಸಿಯುಸಿರು-ಗಳನ್ನು ಎಡೆಬಿಡದೆ ಹೊರಕ್ಕೆ ಹಾಕುವಳು.

ಇದ್ದುದಿದ್ದಹಾಗೆಯೆ ಕಿರುಮನೆಯ—ಮುಂದಕ್ಕೆ ಮಾಡಿದ್ದ—ಕದವನ್ನು ತೆರೆದು ಗಿರಿಧರನು ಒಳಕ್ಕೆ ಬಂದ. ಉಷೆಯು ಕಾಗದವನ್ನು ಸೆರಗಿನಲ್ಲಿ ಮುಚ್ಚಿಕೊಂಡಳು. ಕಣ್ಣೀರನ್ನು ಬೆರಳುಗಳಿಂದ ಒರಸಿ-ಕೊಂಡಳು. ಗಿರಿಧರನು ಚುಚ್ಚುನುಡಿಗಳಿಂದ ಕೇಳಿದ :

"ಸುದರ್ಶನನು ಹೋದುದಕ್ಕೆ ನಿನಗೆ ತುಂಬ ವ್ಯಸನವಾಗಿದೆ-ಯೇನೊ, ಅಲ್ಲವೆ?"

ತಾಳ್ಮೆಗೊಂದು ಮಿತಿಯುಂಟಲ್ಲವೆ? ಸಿಡಿಮಿಡಿಗೊಂಡ ಉಷೆಯು ನುಡಿದಳು:

"ಅಹುದು, ನನಗೆ ವ್ಯಸನವಾಗಿದೆ; ನಿನಗೆ ಮಾತ್ರ ಆನಂದವಾಗಿದೆ-ಯಲ್ಲವೇ?"

"ಅಹುದು, ಆನಂದವೇ ಆಗಿದೆ!"

ಬಿರುದನಿಯಲ್ಲಿ ಉಷೆ ಕೇಳಿದಳು :

"ಸುದರ್ಶನನ ಗೃಹತ್ಯಾಗ ನಿನಗೆ ಆನಂದದಾಯಕ ಸನ್ನಿವೇಶ-ವೆನಿಸಿತೇ? ಆಶ್ಚರ್ಯ!"

"ನೀನೇ ಹೇಳು ಉಷಾ, ಶತ್ರುವು ಅಡಗಿಹೋದರೆ ಆನಂದವು ಯಾರಿಗಾಗದು?"

"ಸುದರ್ಶನನು ನಿನಗೆ ಶತ್ರುವೇ?" ಆಶ್ಚರ್ಯ-ಕರುಣೆಗಳ ಬೆರಕೆಯ ಸ್ವರದಲ್ಲಿ ಉಷಾ ಕೇಳಿದಳು.

"ಸ್ವತ್ತನ್ನು ಅಪಹರಿಸಲಿರುವವನು ಶತ್ರುವಲ್ಲವೇ ಮತ್ತೆ?"

ಉಷೆಯ ಸಂತಾಪವು ಅನಿವಾರ್ಯವಾಯಿತು; ಮಾತನಾಡದೆ, ಮುಸುಗುಟ್ಟುವ ಮೋರೆಯನ್ನು ತಗ್ಗಿಸಿ ಕುಳಿತುಬಿಟ್ಟಳು. ಗಿರಿಧರನು ಸಿಡಿಯುತ್ತ ನುಡಿದ :

"ಉಷಾ, ತಾಯಿಯನ್ನು ಒತ್ತಾಯಪಡಿಸಿ ನಾನೇ ನಿನಗೆ ಸಂಗೀತ ಕಲಿಸಲಿಕ್ಕೆ ಏರ್ಪಾಡು ಮಾಡಿದೆ; ಆದರೆ ಆ ಸಂಗೀತದ ಸ್ವಾರಸ್ಯವನ್ನು ಸವಿಯುವ ಸೌಖ್ಯ ಸುದರ್ಶನನ ಪಾಲಿಗೆ! ಉಣ್ಣುವ ಅನ್ನ ನನ್ನದು, ಉಡುವ ಬಟ್ಟೆ ನನ್ನದು; ಆದರೆ ನಿನ್ನ ಮಾತು-ಕತೆ, ಆಟ-ನೋಟಗಳೆಲ್ಲ ಸುದರ್ಶನನಿಗೆ ನೈವೇದ್ಯ! ದುಡ್ಡು ವೆಚ್ಚಮಾಡಿ, ನಾನು ಪ್ರೀತಿಯಿಂದ ತಂದುಕೊಟ್ಟ ಕರವಸ್ತ್ರದ ಮೇಲೆ ಸುದರ್ಶನನ ಹೆಸರಿಗೆ ಸ್ಥಾನ! ನನ್ನೊಡನೆ ಮಾತನಾಡಬೇಕಾದರೆ ನಿನ್ನ ಮಾನಕ್ಕೆ ಸಾಲದು; ಸುದರ್ಶನನು ಮೈ-ಕೈಗಳನ್ನು ಮುಟ್ಟಿದರೂ ನಿನ್ನ ಮನಸ್ಸಿಗೆ ನಾಚಿಕೆಯೆನಿಸದು. ಅಲ್ಲವೆ?"

ಗಿರಿಧರನ ಮಾತಿನ ಧ್ವನಿಯು ಆರೋಹಣಕ್ರಮವನ್ನು ಅನುಸರಿ-ಸಿದ್ದಿತು. ಉಷೆಯ ಕರುಳುಗಳು ಕುದಿಯಲು ತೊಡಗಿದುವು. ಸಂತಾಪ ದಿಂದ ಒತ್ತರದ ಉಸಿರನ್ನಾಡಿಸುತ್ತ ಕುಳಿತುಬಿಟ್ಟಿದ್ದಳು. ಗಿರಿಧರನು ಮತ್ತೆ ಕೇಳಿದ :

"ನಿನ್ನೆ ಅಮ್ಮ ನಿನಗೆ ಏನು ಹೇಳಿದಳು?"

ರೋಷದಿಂದ ಉಷೆಯು ಗಟ್ಟಿಸಿ ನುಡಿದಳು :

“ನಿನ್ನ ಆರ್ಡಿನನ್ಸ್‌ನ್ನು ಜಾರೀ ಮಾಡಿದಳು; ಇನ್ನೇನು ಹೇಳುವಳು?”

“ನಾನೇನೂ ಗಿರಿಧರನ ಮುಂದೆ ಹೇಳುವುದಿಲ್ಲ; ನೀನು ಹೆದರಬೇಡ—ಎಂದು ಏನೋ ಹೇಳಿದಳಲ್ಲವೇ? ಅದೇನು?”

“ನನಗೊಂದೂ ಗೊತ್ತಿಲ್ಲ!”

“ನೋಡು ಉಷಾ, ನಿಜ ಹೇಳು! ಸುದರ್ಶನನು ನಿನ್ನ ಕೈಯನ್ನು ಹಿಡಿದುಕೊಂಡಿದ್ದನಂತೆ; ಅಹುದೋ ಅಲ್ಲವೋ?”

“ಸಾವಿರಸಲ ಅಹುದು! ಲಕ್ಷ ಸಲ ಅಹುದು!!”

“ಓಹೋ! ಇಷ್ಟೊಂದು ಹೆಮ್ಮೆಯೇ ನಿನಗೆ? ಇಷ್ಟೊಂದು ನಾಚಿಕೆಗೇಡಿಯೇ ನೀನು? ಇದು ನೋಡು, ನಾನು ಆ ಅಳುಬುರುಕ ಸುದರ್ಶನನಲ್ಲ; ಗಿರಿಧರನಿದ್ದೇನೆ ತಿಳಿಯಿತೇನು!”

ಕೋಪಗೊಂಡ ನಾಗರಹಾವಿನಂತೆ ಉಷೆಯು ಫೂತ್ಕರಿಸಿದಳು:

“ಆ ಅಳುಬುರುಕ ಸುದರ್ಶನನ ಅಡಿಯ ಹುಡಿಯ ಬೆಲೆಯು ಈ ಧೀರ ಗಂಭೀರನಾದ ಗಿರಿಧರನಿಗೆ, ಹತ್ತು ಸಲ ಸತ್ತು ಹುಟ್ಟಿಬಂದರೂ ಬರಲಾರದು!”

“ಎಚ್ಚರದಿಂದ ಮಾತನಾಡು ತಿಳಿಯಿತೇನು? ಸುದರ್ಶನನ ವಿಷಯದಲ್ಲಿ ಇಷ್ಟೊಂದು ಅಭಿಮಾನವಲ್ಲವೇ ನಿನಗೆ!”

“ಇದರಲ್ಲಿ ಅಸ್ವಾಭಾವಿಕವೇನೂ ಇಲ್ಲವಲ್ಲ!”

“ಉಷೇ! ಗಿರಿಧರನು ಸ್ವಾಭಿಮಾನಕ್ಕಾಗಿ, ತನ್ನ ಜೀವವನ್ನೂ ತುಳಿದುಹಾಕಿ ಹುಡಿಗೂಡಿಸಿ ಬಿಡಲಿಕ್ಕೆ ಹಿಂದೆಮುಂದೆ ನೋಡುವವನಲ್ಲ; ಗೊತ್ತಾಯಿತೆ? ನಿನ್ನ ಸೊಕ್ಕಿನ ಮಾತುಗಳಿಗೆ ತಕ್ಕ ಪ್ರಾಯಶ್ಚಿತ್ತವನ್ನು ಪಡೆಯಬೇಕಾದೀತು ನೋಡು, ಎಚ್ಚರಿಕೆಯಿಂದಿರು!”

“ಬೆಂಕಿಯಲ್ಲಿ ಬಿದ್ದಿರುವವರಿಗೆ ಮರಣದ ಹೆದರಿಕೆ ಹಾಕುವುದು ವ್ಯರ್ಥಶ್ರಮವಲ್ಲವೇ, ಗಿರಿಧರ?”

ಗಿರಿಧರನು ದುರದುರನೆ ಉಷೆಯನ್ನು ನೋಡಿದನು; ಅವಡು-

ಗಚ್ಚಿ, ಮುಷ್ಟಿಯಿಂದ ಮೇಜಿನಮೇಲೆ ಗುದ್ದಿದನು. ಧಡಧಡನೆಂದು ಕಾಲನ್ನಪ್ಪಳಿಸುತ್ತ ಅಲ್ಲಿಂದ ಹೊರಟುನಡೆದನು.

ಉಷೆಯು ರೋಷವೆಲ್ಲವೂ ಎಲ್ಲಿ ಮರೆಯಾಯಿತೋ ನೊ! ಕರುಣಾರಸ ದಿಂದ ಎರಕಹೊಯ್ದ ಬೊಂಬೆಯಂತೆ ಕುಳಿತುಬಿಟ್ಟಳು. ತನ್ನ ಭವಿಷ್ಯ-ಜ್ಜೀವನದ ಕಣಸುಗಳನ್ನು ಚಿತ್ರಿಸಿ ನೋಡಿಕೊಳ್ಳಬೇಕೆಂದು ಆಕೆ ಅಪೇಕ್ಷಿಸಿದಳು. ಆದರೆ ಯಾವ ಚಿತ್ರಗಳು ಮನದೆದುರು ಬಂದರೂ ಮುಖಕ್ಕೆ ಮುಸುಕು ಹಾಕಿಕೊಂಡೇ ಬರುತ್ತಿದ್ದುವು. ನಿರಾಶೆಯ ನಿಟ್ಟುಸಿರುಗಳು ಮಾತ್ರ ಆಗ ಆಕೆಯ ದುಃಖಭಾರವನ್ನು ಕೊಂಚ ಕಡಿಮೆ ಮಾಡು-ತ್ತಿದ್ದುವು.

---

## ೧೯ನೆಯ ಪರಿಚ್ಛೇದ

ಅಪ್ಪಣರಾಯರಿಗೆ ಸುದರ್ಶನನು ಹೋದುದರಿಂದ ಮನಸ್ಸಿಗೆ ಸೊಗಸೇ ಇರಲಿಲ್ಲ. ಆತನಿಗೆ ಮರಳಿ ಬರುವಂತೆ ಬುದ್ಧಿಯನ್ನು ಕೊಡೆಂದು ಭೈರವನನ್ನು ಆಗಾಗ ಬೇಡಿಕೊಳ್ಳುತ್ತಿದ್ದರು. ವ್ಯಸನದ ಅನುಭವವೆ ಇದುವರೆಗೆ ಅವರಿಗಿರಲಿಲ್ಲ. ಸುದರ್ಶನನ ನೆನಪಾಗಿ ಕರುಳು ಮುರಿಗೆ-ಗೊಳಲು ತೊಡಗಿದುವೆಂದರೆ, ಏನು ಮಾಡಬೇಕೆಂಬುದು ತಿಳಿಯದೆ ಅವರು ಅಡಿಕೆಲೆಯನ್ನು ಕೈಯಲ್ಲಿ ತೆಗೆದುಕೊಳ್ಳುವರು. ಅಷ್ಟರಲ್ಲಿಯೆ ಯಾವುದಾದರೊಂದು ವಿಚಾರದ ಬೆನ್ನನ್ನು ಹತ್ತಿದರೆಂದರೆ, ಕೈಯಲ್ಲಿ ಹಿಡಿದ ಎಲೆಗಳು ಬಾಡಿಹೋಗುತಿರುವುದರ ಕಡೆಗೆ ಅವರ ಲಕ್ಷ್ಯವೇ ಇರುತ್ತಿರಲಿಲ್ಲ.

ಒಂಬತ್ತುಗಂಟೆಯಾಗಿರಬಹುದು. ಯಶೋದಮ್ಮ ಮರುಕದ ಮೂರ್ತಿಯಂತಾಗಿ, ರಾಯರ ಬಳಿಯಲ್ಲಿ ಬಂದು ಉಸ್ಸೆಂದು ಕುಳಿತರು; ಮರವಟ್ಟು ಕುಳಿತ ರಾಯರನ್ನು ಕುರಿತು ಹೇಳಿದರು :

"ಸುದರ್ಶನನನ್ನು ಹುಡುಕುವುದಕ್ಕೆ ಯಾರನ್ನಾದರೂ ಕಳುಹಿ-ಸೋಣವೆ ?"

" ಯಾರನ್ನು ಕಳುಹಿಸಬೇಕು ? ಎಲ್ಲಿಗೆಂದು ಕಳುಹಿಸಬೇಕು ? "

. " ಬೇರೆ ಬೇರೆ ಊರುಗಳಲ್ಲಿರುವ ಗುರುತಿನ ಜನರಿಗೆ ಕಾಗದಗಳನ್ನಾದರೂ ಬರೆದು ಕೇಳಿದರಾಗದೆ ? "

" ಹೌದು ! ಹಾಗೆಯೆ ಮಾಡಬೇಕು; ನಾಳೆ ಗಿರಿಧರನ ಕಡೆಯಿಂದ ಎಲ್ಲ ಕಡೆಗೂ ಕಾಗದ ಬರೆಯಿಸುತ್ತೇನೆ. "

ಯಶೋದಮ್ಮ ನಿರಾಶೆ ತುಂಬಿದ ಉಸಿರೊಂದನ್ನು ಚೆಲ್ಲಿದರು.... ಗಲ್ಲಕ್ಕೆ ಕೈಹಚ್ಚಿ ಕುಳಿತರು.

ರುಷ್ಟಭಾವದವನಾಗಿ ಗಿರಿಧರನು ಒಮ್ಮೆಲೆ ಅಲ್ಲಿಗೆ ಬಂದನು. ರಾಯರು ಅವನಿಗೆ ಹೇಳಿದರು :

" ಗಿರಿಧರ, ಸುದರ್ಶನನು ಎಲ್ಲಿಗೆ ಹೋದನೊ ಏನೊ ! ನಾಳೆಯು ದಿನ ನೀನು, ಆತನ ಪರಿಚಿತರಿಗೂ ನಿನ್ನ ಪರಿಚಿತರಿಗೂ ಕಾಗದ ಬರೆದು ಕೇಳುತ್ತೀಯಾ ? "

ಗಿರಿಧರನು ಗಡುಸುನುಡಿಯಿಂದ ಕೇಳಿದನು :

" ನಿಮಗೆ ಸುದರ್ಶನನು ಬೇಕೋ, ಗಿರಿಧರನು ಬೇಕೋ ? "

ಯಾವುದೂ ತಿಳಿಯದವರಂತೆ, ಆ ಮುದುಕ-ಮುದುಕಿಯರು ಗಾಬರಿಯಿಂದ ಗಿರಿಧರನ ಕಡೆಗೆ ನೋಡಲು ತೊಡಗಿದರು. ಗಿರಿಧರನು ಮತ್ತೆ ಗುಡುಗುಹಾಕಿದ :

" ನಿಮಗೆ ಗಿರಿಧರನು ಬೇಕಾಗಿದ್ದರೆ, ಇನ್ನೊಮ್ಮೆ ಸುದರ್ಶನನ ಹೆಸರನ್ನೂ ಮನೆಯಲ್ಲಿ ಎತ್ತಲಾಗದು; ತಿಳಿಯಿತೇನು ? "

ಮುದುಕ-ಮುದುಕಿಯರು ಮಾತನಾಡದೆ ಇದ್ದರು; ಗಿರಿಧರನು ಮರಳಿ ಮಾತನಾಡಲಾರಂಭಿಸಿದ :

" ಅಮ್ಮಾ, ಸುದರ್ಶನನಂತೆಯೆ ಇನ್ನು ಉಷೆಯೂ ನಮ್ಮ ಮನೆಯಿಂದ ಹೊರಬೀಳಲೆ ಬೇಕು ! "

" ಇದೇನೋ ಗಿರಿಧರ ! ಉಷೆಯು ಹೊರಬೀಳಬೇಕು ....? ಉಷಾ ನಿನಗೆ ಬೇಕಾದವಳಲ್ಲವೆ ? "

"ಇಷ್ಟು ದಿನ ಹಾಗಿದ್ದುದೇನೊ ಸರಿ; ಇನ್ನು ಮೇಲೆ ಇಲ್ಲ!"

"ಎಂದರೆ?"

"ಗಿರಿಧರನು ಎಂಜಲುಕೂಳಿಗೆ ಆಶೆ ಮಾಡುವವನಲ್ಲ!"

"ನಿನ್ನ ಈ ಒಗಟದಂತಹ ಮಾತು ನನಗೇನೂ ತಿಳಿಯುವುದಿಲ್ಲ-ವಪ್ಪಾ!" ಯಶೋದಮ್ಮ ಬೇಸತ್ತುಬಗೆಯುವರಾಗಿ ಹೇಳಿದರು; ರಾಯರು ಮುಂಗಾಣದವರಾಗಿ ಕುಳಿತಿದ್ದರು.

"ನಿನ್ನೆ ನಿನ್ನ ಬಾಯಿಂದಲೆ ಹೊರಟ ಮಾತುಗಳನ್ನು ಕೇಳಿದೆ-ಸುದರ್ಶನನು ಉಷೆಯ ಕೈ ಹಿಡಿದಿದ್ದನೆಂದು. ಉಷೆಯಲ್ಲಿ ನಿನ್ನ ಪ್ರೀತಿ ಬಹಳವಿರಬಹುದು; ಆದರೆ ಅಮ್ಮಾ, ಅವಳ ಮೇಲಿನ ಮಮತೆಯಲ್ಲಿ ನಿನ್ನ ಹೊಟ್ಟೆಯ ಮಗನ ಮಾನಾಪಮಾನಗಳ ಅರಿವೂ ನಿನಗಿರಬಾರದೆ?"

"ಅಲ್ಲವೊ ಗಿರಿಧರ! ಸುದರ್ಶನನು ಹೊರಗಿನವನೇ? ಉಷೆಯೂ ಅವನೂ ಒಂದೇ ಮನೆಯಲ್ಲಿ ಬೆಳೆದವರಲ್ಲವೆ? ಉಷೆಯನ್ನು ಸುದರ್ಶನ ಎತ್ತಿ ಆಡಿಸಿದುದು ನಿನಗೆ ಗೊತ್ತಿಲ್ಲವೆ?"

"ನನಗೆ ಎಲ್ಲವೂ ಗೊತ್ತು. ಸುದರ್ಶನನ ಅಡಿಯ ಹುಡಿಯ ಯೋಗ್ಯತೆಯೂ ನನಗೆ ಇಲ್ಲವೆಂದು, ಉಷೆಯು ನನ್ನೆದುರಿನಲ್ಲಿಯೇ ಆಡಿ-ಬಿಟ್ಟಿದ್ದಾಳೆ. ಆ ಹೆಮ್ಮೆಯ ಕರುವು ಇನ್ನು ಮನೆಯಲ್ಲಿದ್ದರೆ ಸುದರ್ಶನ ನಂತೆ ಗಿರಿಧರನಿಗೂ ಮನೆಯನ್ನು ಬಿಡಬೇಕಾದ ಸಂದರ್ಭ ಬಂದೀತು; ನೋಡಿರಿ, ಮೊದಲೇ ಎಚ್ಚರಿಕೆ ಕೊಟ್ಟಿರುತ್ತೇನೆ!"

ಗಿರಿಧರನು ಎದ್ದು, ಯಾವ ಮರುಮಾತನ್ನೂ ಅಪೇಕ್ಷಿಸದೆ ಹೊರಟು ಹೋದನು. ಹತ್ತುಗಂಟೆ ರಾತ್ರಿಯವರೆಗೆ ಕುಳಿತು ಎಂದೂ ಗೊತ್ತಿಲ್ಲದ ರಾಯರೂ, ಯಶೋದಮ್ಮನವರೂ ಒಂದುಗಂಟೆ ರಾತ್ರಿಯವರೆಗೂ ಕುಳಿತು ಮಾತನ್ನಾಡಿಯೇ ಆಡುತ್ತಿದ್ದರು. ಯಶೋದಮ್ಮನ ಕಣ್ಣಲ್ಲಿ ನೀರು ಸಂತತಧಾರೆಯಾಗಿ ಸುರಿಯುತ್ತಿದ್ದಿತು. ಆಯುಷ್ಯದಲ್ಲಿ ಅವರು ದುಃಖದ ಕಂಬನಿಗಳನ್ನು ಕರೆದುದೆಂದರೆ ಇದೇ ಮೊದಲನೆಯ ದಿನ. ಮಾತಿನ ಕೊನೆಗೆ ರಾಯರು ಮಾತನಾಡಿದುದು ಹೀಗೆ:

"ಗಿರಿಧರನೊಬ್ಬನನ್ನು ಬಿಟ್ಟರೆ ನಮಗೆ ಇನ್ನು ಯಾರಿದ್ದಾರೆ?

ಆತನ ಇಚ್ಛೆಗೆ ವಿರೋಧವಾಗಿಯಾದರೂ ನಾವು ನಡೆಯಬೇಕೇತಕ್ಕೆ? ನಾಳೆಗೆ ರಾಮರಾಯನಿಗೆ ಹೇಳುತ್ತೇನೆ; ಉಷೆಯನ್ನು ಅವಳ ತಂದೆಯ ಮನೆಗೆ ಕಳುಹಿಸಿ ಬರಲಿ!"

ಯಶೋದಮ್ಮ ಉಕ್ಕಿಬರುತ್ತಿರುವ ದುಃಖದಿಂದ ನುಡಿದರು:

"ಉಷೆಯಂತಹ ಸೊಸೆಯನ್ನು ಕಾಣುವುದು ಈ ಪಾಪಿಯ ಪ್ರಾರಬ್ಧದಲ್ಲಿ ಇರಬೇಕಲ್ಲವೆ? ಮನೆಯಲ್ಲಿ ಹೇಳಿಕೇಳಿ ಮಲತಾಯಿ; ಈ ಹುಡುಗಿ ಹೋಗಿ ಇನ್ನು ಅವಳ ಕೈಯಲ್ಲಿ ಬಾಳಬೇಕು! ಎಲ್ಲರನ್ನೂ ಈ ವಿಷಕಾಲದಿಂದ ದೇವರೇ ಪಾರುಮಾಡಬೇಕು!"

---

## ೨೦ನೆಯ ಪರಿಚ್ಛೇದ

ಹರಿಹರದ ನೆರೆಯಲ್ಲಿ, ತುಂಗಭದ್ರೆಯ ತಡಿಯಲ್ಲಿ ದೀನಸೇವಕ-ಸಂಘದ ಎಳೆಂಟು ಕುಟೀರಗಳಿರುವುವು. ಮಧ್ಯದ ದೊಡ್ಡ ಕುಟೀರವು ಸಾಮುದಾಯಿಕ ಪ್ರಾರ್ಥನಾಮಂದಿರವು. ಸಂಘದ ಸಂಸ್ಥಾಪಕರಾದ ಜಗದಾನಂದ ಸ್ವಾಮಿಗಳು ಅಲ್ಲಿಯೆ ವಾಸವಾಗಿರುವರು. ಸಂಘಕ್ಕೆ ಸೇರಿದ ಇತರ ತರುಣ ಬ್ರಹ್ಮಚಾರಿಗಳು, ಸುತ್ತಣ ಕುಟೀರಗಳಲ್ಲಿ ವಸತಿ-ಮಾಡಿಕೊಂಡಿರುವರು. ನಾಡಿನ ದೀನ–ದರಿದ್ರರಲ್ಲಿ ಸಂಸ್ಕೃತಿಯನ್ನು ಹಬ್ಬಿಸಿ, ಅವರಿಗಿರುವ ರಾಜಕೀಯ ಸಾಮಾಜಿಕ ಹಕ್ಕುಬಾಧ್ಯತೆಗಳನ್ನು ತಿಳುಹಿಸಿಕೊಟ್ಟು, ಅವರ ಜೀವನದ ಕೋಟಲೆಗಳನ್ನು ಕಳೆಯುವುದೂ, ಅದರ ಮುಖಾಂತರವಾಗಿಯೆ ವ್ಯಕ್ತಿಯ ಆತ್ಮಶಕ್ತಿಯನ್ನು ಬೆಳೆಯಿಸಿಕೊಳ್ಳುವುದೂ ಈ ಸಂಘದ ಕಾರ್ಯಕರ್ತರ ಗುರಿಯಾಗಿದ್ದಿತು. ಸಂಘದ ಕರ್ತೃತ್ವಶಕ್ತಿಯನ್ನು ನೋಡಿ ಸಂತೃಪ್ತವಾದ ಮೈಸೂರು ಸರಕಾರವು, ಇದಕ್ಕೆ ಅನೇಕಬಗೆಯ ಅನುಕೂಲತೆಗಳನ್ನು ಒದಗಿಸಿ ಕೊಟ್ಟಿದ್ದಿತು. ಸಂಘದ ಕಾರ್ಯಕರ್ತರೆಲ್ಲರೂ ಸುಶಿಕ್ಷಿತರು; ನಾಡಿನ ಏಳಿಗೆಗಾಗಿ ಹಂಬಲಿಸುವವರು; ಬಡವರು ಪಡುತಿರುವ ಭವಣೆಗಳನ್ನು

ಕಂಡು, ಕರುಳುಕುದಿದು, ಕೊರಗಿ, ಅವರ ಸುಖಪ್ರಾಪ್ತಿಗಾಗಿ ಸೊಂಟಕಟ್ಟಿದವರು.

ತಿಳಿಯಾದ ಸಿಹಿನೀರನ್ನು ಹೊತ್ತುಕೊಂಡು, ಹರಿಹಿಂಗದ ಹರುಷ-ಗೀತವನ್ನು ಹಾಡುತ್ತ ಹೊರಟ ತುಂಗಭದ್ರೆ; ಹಸಿರು-ಹಸಿರಾಗಿ ತೋರುವ ದಂಡೆಯ ಬನಸಿರಿ; ಹಕ್ಕಿಪಕ್ಕಿಗಳ ಸ್ವಾತಂತ್ರ್ಯಸಂಗೀತದ ಕಿಲಕಿಲ ನಿನಾದ; ನಿರ್ಭಯವೃತ್ತಿಯ ಕಪಿವೃಂದದ ಉಲ್ಲಾಸದ ಕುಣಿದಾಟ; ಬನದ ನಡುವೆ ಅಚ್ಚುಕಟ್ಟಾಗಿ ಕಟ್ಟಿಸಿದ ಕುಟೀರಗಳು; ಮೈ-ಕೈ ತುಂಬಿ ಪುಷ್ಟವಾಗಿದ್ದ-ಸಂಘಕ್ಕೆ ಸೇರಿದ್ದ-ಹಸುಗಳ ಹಟ್ಟಿ; ತೇಜಸ್ವಿಗಳಾದ ಜಗದಾನಂದರು; ಚಿಗರಿಯ ಚಪಲತೆಯುಳ್ಳ ಹುರುಪಿನ ತರುಣಬ್ರಹ್ಮಚಾರಿಗಳ ಬಳಗ....ಇವೆಲ್ಲವೂ ಕೂಡಿ ಪ್ರಾಚೀನಕಾಲದ ಋಷ್ಯಾಶ್ರಮದ ಜ್ಞಾಪಕವನ್ನು ಉಂಟುಮಾಡುವುವು.

ಸಂಜೆಯ ಐದುಗಂಟೆಗೆ ಪ್ರಾರ್ಥನಾಲಯದಲ್ಲಿ ಶಿಷ್ಯರ ನೆರವಿ ಸೇರಿದ್ದಿತು. ಜಗದಾನಂದರು ತಮ್ಮ ನಿತ್ಯದ ಆಸನದ ಮೇಲೆ ಕುಳಿತಿರು ವರು. ಪ್ರಧಾನಾಸನದಲ್ಲಿ ಭಾರತಮಾತೆಯ ಮೂರ್ತಿಯು ವಿರಾಜಿ ಸುತ್ತಿದೆ. ಅದಕ್ಕೆ ಬಲಗಡೆಗೆ ಭುವನೇಶ್ವರಿಯ ವಿಗ್ರಹವೂ ಎಡಗಡೆಗೆ ಕನ್ನಡತಾಯಿಯ ಪ್ರತಿಮೆಯೂ ಪರಿಶೋಭಿಸುತ್ತಲಿವೆ. ಜನಹಿತಕ್ಕಾಗಿ ದೇಹವನ್ನು ಸವೆಯಿಸಿದ-ಸವೆಯಿಸುತ್ತಿರುವ-ಬೇರೆ ಬೇರೆ ಭಾರತವೀರರ ಚಿತ್ರಗಳು ಕುಟೀರದ ಗೋಡೆಗಳನ್ನು ಅಲಂಕರಿಸಿವೆ. ಒಳಗೆಲ್ಲ ತುಂಬಿ-ಕೊಂಡಿದ್ದ ಧೂಪಧೂಮದ ವಾಸನೆಯೂ, ಅಲ್ಲಿಯ ಶಾಂತವಾದ-ಪವಿತ್ರ ವಾದ-ವಾತಾವರಣವೂ ನೋಡಿದವರ ಹೃದಯವನ್ನು ಅರಳಿಸಿಬಿಡು ವಂತಹವಾಗಿವೆ.

ತಮ್ಮ ಸಂಘಕ್ಕೆ ಹೊಸತಾಗಿ ಸೇರಿಕೊಳ್ಳಲು ಬಂದ ತರುಣ ನೊಬ್ಬನ ಕಡೆಗೆ ಮುಖಮಾಡಿ, ಸ್ವಾಮಿಗಳು ಮುಗುಳುನಗೆಯೊಡನೆ ಮಾತನಾಡಿದರು:

"ಏನಯ್ಯಾ, ನೀನು ನಿಜವಾಗಿಯೂ ನಮ್ಮ ಆಶ್ರಮದಲ್ಲಿ ಸೇರಲು ಅಪೇಕ್ಷಿಸುತ್ತೀಯಾ?"

" ಅಹುದು ಸ್ವಾಮಿಾಜೀ ! "

" ನಮ್ಮ ಈ ಆಶ್ರಮಕ್ಕೆ ಸೇರಬೇಕಾದರೆ ಆಜನ್ಮಬ್ರಹ್ಮಚರ್ಯ-ವ್ರತದ ಪ್ರತಿಜ್ಞೆಯನ್ನು ಮಾಡಬೇಕಾಗುವುದು ! "

ತರುಣನು ಅರೆನಿಮಿಷ ತಡೆದು, ಏನನೋ ಯೋಚಿಸಿದಂತೆ ಮಾಡಿ, ಒತ್ತಿಬಂದ ನಿಟ್ಟುಸಿರನ್ನು ತಡೆದು ನುಂಗಿ, ಮೆಲ್ಲಗೆ ಹೇಳಿದನು :

" ನಾನು ಮನೆಯನ್ನು ಬಿಡಬೇಕಾದರೆ, ಈ ಪ್ರತಿಜ್ಞೆಯನ್ನು ಮೊದಲು ಮಾಡಿಯೆ ಆ ಮೇಲೆ ಬಿಟ್ಟಿದ್ದೇನೆ ; ಬೇಕಾದರೆ ತಮ್ಮ ಸನ್ನಿಧಿಯಲ್ಲಿ ಇನ್ನೊಂದು ಸಲ ಮಾಡುತ್ತೇನೆ ! "

" ಮನೆಯಲ್ಲಿ ನಿನಗೆ ಯಾರು ಯಾರು ? ತಂದೆ-ತಾಯಿಗಳು ಇದ್ದಾರೆಯೇ ? ಅಣ್ಣ-ತಮ್ಮ ಯಾರಾದರೂ ? "

" ಚಿಕ್ಕತನದಲ್ಲಿಯೆ ತಂದೆ-ತಾಯಿಗಳು ತೀರಿಹೋಗಿದ್ದಾರೆ. ಯಾರೋ ಪುಣ್ಯವಂತರೊಬ್ಬರು ಸಾಕಿ ಸಲಹಿ, ಸಂಸ್ಕಾರವನ್ನು ಕೊಡಿಸಿದ ಜೀವವಿದು. ಯಾರ ಅನ್ನದಿಂದಲೋ ಬೆಳೆದ ಈ ದೇಹವನ್ನು, ಲೋಕಸೇವಾ ಕಾರ್ಯದಲ್ಲಿ ಸಮರ್ಪಿಸಿ ಸಾರ್ಥಕಗೊಳಿಸಬೇಕೆಂದು ತಮ್ಮಲ್ಲಿಗೆ ಬಂದಿದ್ದೇನೆ. "

" ವಿದ್ಯಾಭ್ಯಾಸಂಗ ಎಲ್ಲಿಯವರೆಗೆ ಆಗಿದೆ ? "

" ಮೊನ್ನೆ ಮೊನ್ನೆಯೆ ಬಿ. ಎ. ಪರೀಕ್ಷೆಗೆ ಕುಳಿತು ಬಂದಿದ್ದೇನೆ ; ಉತ್ತೀರ್ಣನಾಗುವೆನೆಂದು ಪೂರ್ಣ ಭರವಸೆಯೂ ನನಗುಂಟು. "

" ಸರಿ, ನಿನ್ನವರೆನ್ನುವವರು ಯಾರೂ ಇಲ್ಲವೇ ? "

ತರುಣನು ಕೊಂಚ ತಡೆದು, ಜಡವಾದ ದನಿಯಲ್ಲಿ ನುಡಿದ :

" ಯಾ—ರೂ—ಇ—ಲ್ಲ "

" ಮಾತೇಕೋ ಜಡವಾಗಿ ಹೋಗುತ್ತಿದೆ; ಯಾರೂ ಇಲ್ಲವೇ ? "

" ತಂದೆ-ತಾಯಿಗಳಿಲ್ಲ, ಅಣ್ಣ-ತಮ್ಮಂದಿರಿಲ್ಲ, ಅಕ್ಕ-ತಂಗಿಯರಿಲ್ಲ, ಮದುವೆಯಂತೂ ಆಗಿಯೇ ಇಲ್ಲ. ಇನ್ನು ಯಾರು ಇದ್ದಾರೆಂದು ಹೇಳಲಿ ? " ಒಂದೆರಡು ಕ್ಷಣ ತಡೆದು ಸ್ವಾಮಿಗಳು ಹೇಳಿದರು :

" ಲೋಕಸೇವೆಯೆಂದರೆ ಮಡಿಲಲ್ಲಿ ಕಿಚ್ಚು ಕಟ್ಟಿಕೊಂಡು ತಿರುಗಿದಂತಹ ಕೆಲಸ ನೋಡು ! "

“ ಎಂತಹ ಕಷ್ಟ-ನಷ್ಟಗಳನ್ನೂ ಎದುರಿಸುವ ಧೈರ್ಯವು ನನಗೆ ಇದೆಯೆಂದು ನನ್ನದೊಂದು ಮರುಳುನಂಬುಗೆ. ”

“ ಆಗಲಿ! ನಂಬುಗೆಯು ಪರೀಕ್ಷಾ ಕ್ಷೇತ್ರದಲ್ಲಿ ಕಾಲಿಡು; ನಿನ್ನದು ಮರುಳುನಂಬುಗೆಯೋ ತಿರುಳುನಂಬುಗೆಯೋ ಎಂಬುದನ್ನು ಪ್ರತ್ಯಕ್ಷ ಕಂಡುಕೊಂಡು ಬಿಡು ! ”

ಹೊಸದಾಗಿ ಬಂದವನನ್ನು ಸಂಘಕ್ಕೆ ಸೇರಿಸಿಕೊಳ್ಳುವ ದೀಕ್ಷಾ-ವಿಧಿಯು ಕ್ರಮವಾಗಿ ನಡೆಯಿತು. ತರುಣನು ಮತ್ತೊಮ್ಮೆ ಆಜನ್ಮ ಬ್ರಹ್ಮಚರ್ಯವ್ರತದ ಪ್ರತಿಜ್ಞೆಯನ್ನು ಮಾಡಿಬಿಟ್ಟನು.

ಜಗದಾನಂದರಿಗೆ ಇಂದು ಹೊಟ್ಟೆತುಂಬ ಹಿಗ್ಗೋ ಹಿಗ್ಗು. ಅವರಿಗೆ ಮನುಷ್ಯನ ಹೃದಯಪರೀಕ್ಷೆಯು ಬಲು ಬೇಗನೆ ಆಗಿಬಿಡುವುದು. ಹೊಸತಾಗಿ ಬಂದ ತರುಣನಿಂದ-ಖಂಡಿತವಾಗಿಯೂ ತಮ್ಮ ಸಂಘದ ಕಾರ್ಯವು ಯಶಸ್ವಿಯಾಗಿ ಸಾಗುವುದೆಂದು ಉಂಟಾದ ನಂಬುಗೆಯೆ ಅವರ ಇಂದಿನ ಹಿಗ್ಗಿಗೆ ಕಾರಣ.

---

## ೨೧ನೆಯ ಪರಿಚ್ಛೇದ

ಉಷೆಯ ತಂದೆಯ ಮನೆಯಿರುವುದು ಬಾಗಿಲುಕೋಟೆಯಲ್ಲಿ. ಹಿರಿಯರಿಂದ ನಡೆದುಕೊಂಡು ಬಂದ ಸಿರಿವಂತಿಕೆಯು, ಉಷೆಯ ತಂದೆ ತಿರುಮಲರಾಯರ ಪಾಲಿಗೂ ಬಂದಿದ್ದಿತು. ರಾಯರಿಗೆ ವ್ಯಾಪಾರದ ಕಡೆಗೆ ಒಲವು; ದೇಶೀಯ ಉದ್ಯೋಗಗಳನ್ನು ಬಳೆಯಿಸಬೇಕೆಂಬುದು ಅವರ ಅಪೇಕ್ಷೆ. ಆದರೆ ತಾವಾಗಿಯೆ ಯಾವ ಕೆಲಸವನ್ನೂ ಮಾಡರು. ಎಲ್ಲವೂ ನೌಕರರಿಂದಲೆ ನಡೆಯಬೇಕು. ಎಂತಲೆ ಅದೆಷ್ಟೋ ಉತ್ಸಾಹದಿಂದ ಸ್ಥಾಪಿಸಿದ “ ವಿಜಯಲಕ್ಷ್ಮಿ ವೀವಿಂಗ್ ಮಿಲ್ಲು ” ನಾಲ್ಕಾರು ವರುಷಗಳಲ್ಲಿಯೆ ಬುಡಮೇಲಾಯಿತು. ಇದರಿಂದ ರಾಯರ ಬಂಡ-ವಾಳವು ಬರಿದಾಯಿತು. ಆಗಲೇ ಅವರ ಮೊದಲಿನ ಹೆಂಡತಿ ಎಂದರೆ ಉಷೆಯ ತಾಯಿ ತೀರಿಹೋಗಿ ಬಿಟ್ಟಳು.

ಮತ್ತೊಂದು ಮದುವೆಯ ವೆಚ್ಚ, ಹೊಸಹೆಂಡತಿಯು ದಿನದಿನದ ಹೊಸ ಹೊಸ ಬೇಡಿಕೆಗಳನ್ನು ಪೂರಯಿಸುವ ವೆಚ್ಚ ಇವ್ರಗಳಿಂದಂತೂ ರಾಯರು ತೀರ ಹಣ್ಣುಹಣ್ಣಾಗಿ ಹೋಗಿದ್ದರು. ಉಷೆಯ ಮೇಲೆ ರಾಯರಿಗೆ ಅತಿಶಯವಾದ ಪ್ರೀತಿ; ಆದರೂ ಅವಳನ್ನು ನೋಡಿಬರ-ಬೇಕೆಂದರೆ ಹೊಸಹೆಂಡತಿಯ ಹೆದರಿಕೆ. ಆದರಿಂದಲೇ ತಿರುಮಲ ರಾಯರು—ಉಷೆಯನ್ನು ಯಶೋದಮ್ಮ ಕರೆದುಕೊಂಡು ಹೋದ ಮೇಲೆ— ಒಂದುಸಲವೂ ಮಗಳನ್ನು ನೋಡಲಿಕ್ಕೆ ಹೋಗಿರಲಿಲ್ಲ. ಸಂಸಾರದ ಅಸಮಾಧಾನದ ಪರಿಸ್ಥಿತಿಯಿಂದ, ಉಷೆಯ ಕ್ಷೇಮವಾರ್ತೆ-ಯನ್ನು ಕಾಗದ ಪತ್ರಗಳಿಂದ ತಿಳಿದುಕೊಳ್ಳುವಷ್ಟು ರಾಯರಿಗೆ ಶಾಂತತೆ ಯಿರಲಿಲ್ಲ. ಅನೇಕ ಚಿಂತೆಗಳ ಲೀಲಾರಂಗವಾದ ರಾಯರ ಮನಸ್ಸಿನಲ್ಲಿ, ಅವರನ್ನು ಅಗಲಿ ಹೋದಾಗಿನ ಉಷೆಯ ಬಾಲಮೂರ್ತಿ ಆಗಾಗ ಬಂದುನಿಂತು, ಮೈಗೂದಲನ್ನು ನಿಮಿರಿಸುವುದು; ಮನದ ಅಶಾಂತತೆಯನ್ನು ಮತ್ತಿಷ್ಟು ಹೆಚ್ಚಿಸುವುದು.

"ಎಲ್ಲಿಯಾದರೂ ಇರಲಿ, ಮಗಳು ಇಲ್ಲಿರುವುದಕ್ಕಿಂತ ಸುಖಿ-ಯಾಗಿ ಯಶೋದಮ್ಮನ ಬಳಿಯಿದ್ದಾಳೆ. ಆಕೆಯ ಎಲ್ಲ ಹೊಣೆಗಾರಿಕೆ ಯನ್ನೂ ಯಶೋದಮ್ಮನೇ ಹೊತ್ತಿದ್ದಾಳೆ" ಎಂದು ರಾಯರು ಇದ್ದುದ ರಲ್ಲಿಯೇ ಸಮಾಧಾನವನ್ನು ಹಚ್ಚಿಕೊಳ್ಳುತ್ತಿದ್ದರು. ಆದರೆ ಈಗ ಅನಪೇಕ್ಷಿತವಾಗಿ, ಬೆಳೆದು ದೊಡ್ಡವಳಾದ ಉಷೆಯು ಮನೆಗೆ ಬಂದುದು ರಾಯರ ನಿರಂತರಚಿಂತೆಗೆ ಕಾರಣವಾಯಿತು.

"ಇಪ್ಪತ್ತು ವರುಷದವಳಾಗಿದ್ದಾಳೆ. ಇನ್ನೂ ಮದುವೆಯಿಲ್ಲ!" ಎಂದು ಮುಖ ಮುದುಡಿಸಿ, ಚುಚ್ಚುಮಾತುಗಳನ್ನಾಡುವ ಜನರಿಗೇನೂ ಆ ಊರಲ್ಲಿ ಕೊರತೆಯಿರಲಿಲ್ಲ. ಈ ಬಗೆಯ ಎಷ್ಟು ಮಾತುಗಳನ್ನೂ ತಿರುಮಲರಾಯರು ಸಹಿಸಿಕೊಂಡಿರಬಹುದಾಗಿದ್ದಿತು ; ಆದರೆ ಉಷೆಯು ತಮ್ಮಲ್ಲಿಗೆ ಬಂದ ಒಂದೆರಡು ದಿನಗಳಲ್ಲಿಯೆ, ಊರಲ್ಲೆಲ್ಲ ಹಬ್ಬಿರುವ ಉಷಾ-ಸುದರ್ಶನರ ವಿಷಯಕವಾದ ದುಷ್ಟವಾರ್ತೆಯನ್ನು ಕೇಳಿ, ತಿರುಮಲರಾಯರಿಗೆ ಊಟ-ಉಡಿಗೆಗಳು ಕೂಡ ರುಚಿಸದಾಗಿದ್ದುವು.

ಉಷೆಯು ಇಲ್ಲಿಗೆ ಬಂದು ಐದಾರು ದಿನಗಳಾಗಿದ್ದರೂ ಒಂದು ದಿನವೂ ಬೀದಿಯ ಬಾಗಿಲಿಗೆ ಬಂದುದಿಲ್ಲ. ಮನೆಗೆ ಬಂದ ಮೊದಲನೆಯ ನಿಮಿಷದಲ್ಲಿಯೆ ಕಣ್ಣಿಗೆ ಬಿದ್ದ ಮಲತಾಯಿಯ ಉರಿಮೊಗವನ್ನು ತಣ್ಣಿ ಸುವುದು ಹೇಗೆಂದು, ಉಷೆಗೆ ಹೊಸದೊಂದು ಯೋಚನೆಯುಂಟಾ ಯಿತು. ತಂಗೊಳದಲ್ಲಿ ಅರಳಿ ನಕ್ಕು ನಲಿಯುತ್ತಿರುವ ತಾವರೆಯೊಂದನ್ನು ಕಿತ್ತುತಂದು, ಬಯಲುಸೀಮೆಯ ಬೇಸಗೆಯ ಬಿರುಬಿಸಿಲಿನಲ್ಲಿ ಬಿಸಾಡಿ ದಂತಾಯಿತು—ಉಷೆಯ ಪಾಡು.

ಮಸಕುಬೆಳಕಿನ ಕಿರುಮನೆಯೊಂದರಲ್ಲಿ, ಮೊಣಕಾಲಮೇಲೆ ತಲೆಯ ಭಾರವನ್ನು ಹಾಕಿ ಕುಳಿತ ಉಷೆಯ ಗುರುತು ಯಾರಿಗಾದರೂ ಸಿಕ್ಕಬಹುದೆ? ಉಟ್ಟಿದ್ದ ಮಾಸಲುಬಣ್ಣದ ಹಳೆಯ ಬಟ್ಟೆಯೇನು! ಓರಣವಿಲ್ಲದುದರಿಂದ ಅಸ್ತವ್ಯಸ್ತವಾದ ತಲೆಗೂದಲುಗಳೇನು! ಗುಳಿಬಿದ್ದ ಕಣ್ಣುಗಳೇನು! ಬಾಡಿಬತ್ತಿಹೋದ ಮುಖವೇನು! ಕಂದಿ ಕುಂದಿದ ಮೈಬಣ್ಣವೇನು! ಎಲ್ಲದರಲ್ಲಿಯೂ ಅದೆಂತಹ ಮಾರ್ಪಾಡು! ಹೆಸರೊಂದ ರಿಂದಲೇ ನಾವು ಇಂದು ಉಷೆಯನ್ನು ಗುರುತಿಸಬೇಕು. ಸುದರ್ಶನ ಪರೀಕ್ಷೆಯಲ್ಲಿ ಪಾಸಾದ ವರ್ತಮಾನ ಇಂದು ಉಷೆಗೆ ಗೊತ್ತಾಗಿದ್ದಿತು; ಅದರಿಂದ ತನಗೆ ಸಂತೋಷವಾಗಿದೆಯೊ ದುಃಖವಾಗಿದೆಯೊ ಎಂಬುದು ತನಗೇ ತಿಳಿಯದಂತಾಗಿದ್ದಿತು.

ಉಷೆಯು ಮೆಲ್ಲಗೆ ಎದ್ದು ಅಲ್ಲಿಯೆ ಇದ್ದ ತನ್ನ ಪೆಟ್ಟಿಗೆಯನ್ನು ತೆರೆದಳು. ಒಂದು ಕಾಗದದ ಮಡಿಕೆಯನ್ನೂ ಕರವಸ್ತ್ರವೊಂದನ್ನೂ ಕೈಗೆ ತೆಗೆದುಕೊಂಡಳು. ಪೆಟ್ಟಿಗೆಯನ್ನು ಮುಚ್ಚಿ, ಮತ್ತೆ ತಾನು ಮೊದಲು ಕುಳಿತಿದ್ದ ಸ್ಥಳದಲ್ಲಿಯೆ ಬಂದು ಕುಳಿತಳು. ಮೊದಲು ಕಾಗದದ ಮಡಿಕೆಯನ್ನು ಬಿಚ್ಚಿ, ಅದರಲ್ಲಿ ಬರೆದುದನ್ನು ಒಮ್ಮೆ ಓದಿದಳು; ಇನ್ನೊಮ್ಮೆ ಓದಿದಳು, ಮತ್ತೊಮ್ಮೆ ಓದಿದಳು. ಯಾವುದನ್ನೂ ನೋಡದ—ತೆರೆದ ಕಣ್ಣುಗಳಿಂದ ಹಾಗೆಯೆ ಕುಳಿತಳು. ಕೊನೆಗೊಂದು ನಿಟ್ಟುಸಿರನ್ನಿಟ್ಟಳು. ಕರವಸ್ತ್ರವನ್ನು ಬಿಚ್ಚಿ, ಅದರ ಮೇಲಿರುವ '**ಸುದ-ರ್ಶನ**' ಎಂಬ ಅಕ್ಷರಗಳ ಮೇಲೆ ತನ್ನ ಕರುಣಾಪೂರಿತವಾದ ದೃಷ್ಟಿ ಗಳನ್ನು ನೆಲಸಿದಳು. ಐದು ನಿಮಿಷವಾಯಿತು, ಹತ್ತು ನಿಮಿಷವಾಯಿತು,

ಕಾಲುಗಂಟೆಯಾಯಿತು. ಉಷೆಯು ಆ ಅಕ್ಷರಗಳಲ್ಲಿ ಯಾವ ಯಾವ ಚಿತ್ರಗಳನ್ನು ನೋಡುತ್ತಿದ್ದಳೊ ಯಾರು ಬಲ್ಲರು! ಮುಖದ ಮೇಲೆ ವಿವಿಧಭಾವಗಳು ಮೂಡಿ ಮರೆಯಾಗುತ್ತಿದ್ದುವು.

ತೀರ ಚಿಕ್ಕವಳಿರುವಾಗ, ತನ್ನನ್ನು ವಾತ್ಸಲದಿಂದ ಮುತ್ತಿಟ್ಟು ಕರೆದುಕೊಳ್ಳುತ್ತಿದ್ದ— ವಿಕಾರರಹಿತಮನದ— ಸುದರ್ಶನನ ಕಿಶೋರ-ಚಿತ್ರವು ಆ ಅಕ್ಷರಗಳಲ್ಲಿ ತೋರಿ, ಉಷೆಯ ಮುಖದ ಮೇಲೆ ನಗೆಯ ನೆರಳು ಓಡಾಡಿತು. ತನಗೆ ಅತ್ಯಂತ ಆಸಕ್ತಿಯಿಂದ ಪಾಠವನ್ನು ಕಲಿಸುತ್ತಿದ್ದ—ಪವಿತ್ರ ಗುರುಮೂರ್ತಿ—ಸುದರ್ಶನನ ಚಿತ್ರವು ಕಂಡು, ಆದರ-ಭಾವವು ಆಟವಾಡಿತು. ತನ್ನ ಸಂಗೀತವನ್ನು ಕೇಳಿ ತಲೆದೂಗುವ, ತನಗೆ ಸ್ವಾರಸ್ಯವಾದ ಕಾವ್ಯ-ಕವನಗಳನ್ನೋದಿ ತೋರಿಸುವ ರಸಿಕಶೇಖರ ಸುದರ್ಶನನ ಚಿತ್ರವು ಕಣ್ಣಿಗೆ ಬಿದ್ದು, ಉಷೆಯ ಮುಖವು ಒಂದು ಬಗೆಯ ಉತ್ಸಾಹಕ್ಕೆ ಔತನವಿತ್ತಿತು. ತಾನು ಕನಸಿನಲ್ಲಿ ಹೆದರಿ ಕೂಗಿದಾಗ ಬಳಿಯಲ್ಲಿ ಕುಳಿತು ಮೈದಡಹುವ-ಪ್ರೇಮಮೂರ್ತಿ ಸುದರ್ಶನನ ಚಿತ್ರವು ಆ ಅಕ್ಷರಗಳಲ್ಲಿ ಬಂದುನಿಂತು, ಅವಳ ಮುಖದಲ್ಲಿ ಆಶಾಭಾವವು ತಲೆಯೆತ್ತಿ ನಿಂತಿತು. ಕೊನೆಗೆ, ಹಾಸಿಗೆಯಲ್ಲಿ ಮಲಗಿದಾಗ ಆವೇಶಗೊಂಡು ತನ್ನ ಕೈಯನ್ನು ಹಿಡಿದ ಆಶಾಮೂರ್ತಿ ಸುದರ್ಶನನ ಚಿತ್ರವು ನೋಡಲು ದೊರೆತು, ಉಷೆಯ ಕಣ್ಣೊಳಗಿಂದ ಕಾತರಭಾವವನ್ನು ಹೊರಕ್ಕೆ ತೋರಿಸಿತು. ಒಂದು ಸಲವಂತೂ ಪರೀಕ್ಷೆ ಪಾಸಾದುದನ್ನು ತಿಳುಹಲಿಕ್ಕೆಂದು ತಾನು ಕುಳಿತಲ್ಲಿಯೆ ಸುದರ್ಶನನು ಬಂದು-ಬಿಟ್ಟನೆಂಬ ಭಾವನೆಯಿಂದ ಅವಳು ನಾಚಿ ತಲೆಬಾಗಿಸಿದಳು; ಸೆರಗನ್ನು ಸಾವರಿಸಿಕೊಂಡಳು. ಕೂಡಲೆ ವಸ್ತುಸ್ಥಿತಿಯ ಅರಿವು ಉಂಟಾಗಿ "ಇಲ್ಲಿ ಎಲ್ಲಿಯ ಸುದರ್ಶನ!" ಎಂದು ನಿರಾಶೆಯ ಉಸಿರೊಂದನ್ನು ಚೆಲ್ಲಿದಳು. ಕೊನೆಗೊಮ್ಮೆ ನಾಲ್ಕಕ್ಷರಗಳ, ಮುಕ್ಕಾಲು ಗಂಟೆಯ—ಮೂಕತನದ—ನಿರೀಕ್ಷಣವು ಮುಗಿಯಿತು. ಕಾಗದವನ್ನೂ ವಸ್ತ್ರವನ್ನೂ ಬಿಟ್ಟು, ಮೊಣಕಾಲಮೇಲೆ ತಲೆಯ ಭಾರವನ್ನು ಹಾಕಿಕೊಂಡು, ಉಷಾ ಸುಮ್ಮನೆ ಕುಳಿತುಬಿಟ್ಟಳು. ಮನಸ್ಸು ಒಳಗೊಳಗೆಯೆ ಮಾತನಾಡುತ್ತಿದ್ದಿತು :

“ದೇವಾ! ಇಂತಹದೊಂದು ಕರುಣಾರಸಪ್ರಧಾನವಾದ ಕಥೆಯ ನಾಯಿಕೆಯನ್ನಾಗಿ ಮಾಡುವುದಕ್ಕೆಂದೇ ನನ್ನನ್ನು ಹುಟ್ಟಿಸಿದ್ದೀಯಾ? ಏತಕ್ಕಾಗಿ ನನ್ನ ತಾಯಿ ಸಾಯಬೇಕು! ಯಶೋದತ್ತೆ ಏತಕ್ಕಾಗಿ ತವ್ರ್ಮಲ್ಲಿಗೆ ನನ್ನನ್ನು ಕರೆದುಕೊಂಡು ಹೋಗಬೇಕು! ಸರಿ, ಕರೆದು ಕೊಂಡು ಹೋದಳು— ಆಯಿತು; ಸುದರ್ಶನನ— ನನ್ನ— ಪರಿಚಯದ ಸಂಬಂಧವು ಏತಕ್ಕಾಗಿ ಕೂಡಿಬರಬೇಕು! ಎಲ್ಲವೂ ವಿಚಿತ್ರವಾದ ಅದೃಷ್ಟಘಟನೆ! ಗಿರಿಧರನೇ ಸುದರ್ಶನನಾಗಿ, ಸುದರ್ಶನನೇ ಗಿರಿಧರನಾಗಿ ಹುಟ್ಟಿದ್ದರೆ ನಾನು ಸುಖಿಯಾಗಿರಬಹುದಾಗಿದ್ದಿತಲ್ಲವೆ? ಸರಿ, ನನ್ನದು ಇದೊಂದು ಹುಚ್ಚು! ಇನ್ನು ನನ್ನದೇನು ಗತಿ? ಮಲತಾಯಿಯ ಕಾಟ ವನ್ನು ನಾನು ಹೇಗಾದರೂ ಸಹಿಸಿಕೊಂಡು ಇರಬಲ್ಲೆ; ಆದರೆ ತಂದೆಯ ಹೃದಯದ ತೊಳಲಾಟವನ್ನು ಮಾತ್ರ ನೋಡಿ ಸಹಿಸಿಕೊಳ್ಳಲಾರೆ! ಅಯ್ಯೋ, ಎಂತಹ ಪ್ರೇಮಮೂರ್ತಿಯವನು! ಇದುವರೆಗೆ ಅನುಭವ ವಿಲ್ಲದ—ಹೆತ್ತ ಕರುಳಿನ ಬಗೆಗಿರುವ ಒಲುಮೆಯ ಅನುಭವವು, ಇಲ್ಲಿಗೆ ಬಂದ ಮೇಲೆ ನನಗೆ ಒದಗಿದಂತಾಯಿತು. ಎಂತಹ ನಿಸ್ವಾರ್ಥದ ಪ್ರೇಮ ತಂದೆಯದು! ದುಷ್ಟವಾದ ಜನವಾರ್ತೆಯನ್ನು ಕೇಳಿ ಕೇಳಿ, ತನ್ನೊಳಗೆ ತಾನೆ ಬೆಂದು ಬೇಗುದಿಗೊಳ್ಳುವನಲ್ಲದೆ, ನನ್ನ ವಿಷಯದಲ್ಲಿ ಕೊಂಚವಾದರೂ ಬೇಸರಪಟ್ಟು ಕೊಳ್ಳುತ್ತಾನೆಯೆ? ನನ್ನನ್ನು ನೋಡಿ ದಾಗಲೆಲ್ಲ ನಗುನಗುತ್ತಲೇ ಇರುವನು. ನಾನು ಹಿಂದಕ್ಕೆ ಒನ್ಮೆ ನೋಡಿ ದಾಗ ಹೇಗೆ ಆನೆಯಂತಿದ್ದ ಆ ತಂದೆ—ಈಗ ಒಣಗಿದ ಸಂಡಿಗೆಯಂತಾಗಿ ದ್ದಾನೆ. ಮೊದಲೇ ಕೈಯಲ್ಲಿಯ ಹಣವನ್ನು ಕಳೆದುಕೊಂಡ ಚಿಂತೆ; ಮನೆಯಲ್ಲಿ ಹೆಂಡತಿಯು, ಕುಳಿತಾಗ ನಿಂತಾಗ ಎಡೆಬಿಡದೆ ಕರುಳನ್ನು ಮಾಟುತ್ತಿರುವುದೊಂದು ಹೆಚ್ಚಿನ ಚಿಂತೆ. ಅದರಲ್ಲಿ ನಾನೊಂದು ಬಿಡಿಸ— ಲಾರದ ತೊಡಕಾಗಿ ಕುಳಿತಿದ್ದೇನೆ ಆತನಿಗೆ. ನಾನೀಗ ಏನು ಮಾಡಲಿ ದೇವರೇ! ನನ್ನ ಬಾಳು ಏನಾದರೂ ಹಾಳಾಗಿ ಹೋಗಲಿ; ನನ್ನ ತಂದೆ ಸೌಖ್ಯವಾಗಿರುವುದನ್ನು ನೋಡಿಯಾದರೂ ನಾನು ಸಮಾಧಾನಪಡುವೆ ನೆಂದರೆ ಅದನ್ನೂ ಹಣೆಯಲ್ಲಿ ಬರೆದಿಲ್ಲವೇ! ನನ್ನ ಎಲ್ಲ ಅವಸ್ಥೆಯನ್ನು ಸುದರ್ಶನನಿಗೆ ಬರೆದು ತಿಳುಹಿದರೆ, ಅವನು ಎಲ್ಲಿ ಇದ್ದರೂ ಬಾರದೆ

ನಿಲ್ಲಲಿಕ್ಕಿಲ್ಲವೆಂದು ನನ್ನ ಮನಸದ ಭರವಸೆ; ಆದರೆ ಎಲ್ಲಿದ್ದಾನೆಂಬುದು ಗೊತ್ತಾಗುವ ಬಗೆ ಹೇಗೆ ?''

ಉಷೆಯ ತಲೆಯಲ್ಲಿ ವಿಚಾರಗಳ ಲಹರಿ; ಬಾಯಲ್ಲಿ ಎಣಿಸಲಾರದಷ್ಟು ಬಿಸಿಯುಸಿರುಗಳು; ಕಣ್ಣಲ್ಲಿ ಹಳ್ಳವಾಗಿ ಹರಿಯುತ್ತಿರುವ ಕಂಬನಿಗಳು.

ಹಠಾತ್ತಾಗಿ ಉಷೆಯ ಮಲತಾಯಿ ಕಮಲಮ್ಮ ಅಲ್ಲಿಗೆ ಬಂದರು. ಗಂಟಿಕ್ಕಿದ ಹುಬ್ಬು, ಒಟಗುಟ್ಟುವ ಬಾಯಿ, ಕರ್ಕಶತೆಯು ಅಡಿಯಿಂದ ಮುಡಿಯ ವರೆಗೆ ವ್ಯಾಪಿಸಿದಂತೆ ತೋರುತ್ತಿದ್ದಿತು. ಒಮ್ಮೆಲೆ ಸಿಡುಕಿನ ಧ್ವನಿಯಲ್ಲಿ ಗುಡುಗಿದರು:

" ಹಗಲಿರುಳೂ ಹೀಗೆ ಕುಳಿತುಕೊಂಡು ಬಿಟ್ಟರೆ ಹೇಗೆ ನಡೆಯಬೇಕಮ್ಮಾ! ಅಡಿಗೆಯವಳಂತೂ ಹೊರಟುಹೋದಳು. ನಮ್ಮ ಹಣೆಯ ಬರೆಹಕ್ಕೆ ಅವಳಾದರೂ ಏನು ಮಾಡುವಳು! ತಿಂಗಳುತಿಂಗಳಿಗೆ ಸಂಬಳ ಸರಿಯಾಗಿ ಕೊಡುವ ಯೋಗ್ಯತೆ ನಮ್ಮಲ್ಲಿ ಇಲ್ಲದ ಮೇಲೆ, ಅಡಿಗೆಯವರು ಏತಕ್ಕೆ ನಿಂತಾರು? ಮನೆಯಲ್ಲಿ ಕುಳಿತು ತಿನ್ನುವವರ ಸಂಖ್ಯೆಯು ಬೆಳೆಯುತ್ತ ನಡೆದರೆ, ತಂದುಹಾಕುವವರ ಅವಸ್ಥೆಯೇನಾದೀತು.... ಗೊತ್ತಾಗದೇ? ಏಳು, ನನಗೆ ಬೇರೆ ಕೆಲಸವಿದೆ; ಸಂಜೆಯ ಅಡಿಗೆಯನ್ನು ನೀನೇ ಮಾಡಬೇಕು!"

" ಆಗಲಮ್ಮಾ, ಮಾಡುತ್ತೇನೆ!" ಎಂದು ಉಷಾ ಹೇಳುತ್ತಲಿರುವಾಗಲೇ ಕಮಲಮ್ಮ ಅಲ್ಲಿಂದ ಹೊರಟು ಬಿಟ್ಟಿದ್ದರು. ಉಷೆಯು ಇಲ್ಲದ ಬಲವನ್ನು ಎಳೆದು ತಂದುಕೊಂಡು ಮೇಲಕ್ಕೆದ್ದಳು; ಕಾಗದ-ಕರವಸ್ತ್ರಗಳನ್ನು ಪೆಟ್ಟಿಗೆಯಲ್ಲಿಟ್ಟು ಕಿರುಮನೆಯಿಂದ ಹೊರಬಿದ್ದಳು.

ಒಲೆಯ ಮುಖವನ್ನೇ ನೋಡದಿದ್ದ ಉಷೆಯು, ಅಂದು ಅಡಿಗೆಯನ್ನು ಹೇಗೆ ಹೇಗೆ ಮಾಡಿದಳೋ ಉಂಡವರಿಗೇ ಗೊತ್ತು. ಒಂದುವೇಳೆ ಅಡಿಗೆಯಲ್ಲಿ ಏನಾದರೂ ಕೊಂಚ ಅವ್ಯವಸ್ಥೆಯಾಗಿದ್ದರೆ, ಕಮಲಮ್ಮನಿಂದ ಕೂಗಾಡಿಸಿಕೊಂಡ ಉಷೆಯು, ಅಂದಿನ ರಾತ್ರಿಯನ್ನೆಲ್ಲ ಕಣ್ಣಿಗೆ ಕಣ್ಣು ಹಚ್ಚದೆ ಕಳೆದಿರಬಹುದು.

# ೨೨ನೆಯ ಪರಿಚ್ಛೇದ

ಸರಸಮ್ಮನ ಅಡಿಗೆಯೆಲ್ಲ ಮುಗಿದು, ಮಾಡಿದುದೆಲ್ಲ ತಣ್ಣಗಾಗಿ ಹೋಗುವುದರಲ್ಲಿ ಇದ್ದಿತು. ಬೆಳಗಿನ ಎಂಟುಗಂಟೆಗೆ ಪ್ರಭೆಯ ಮನೆಗೆ ಸಂಗೀತ ಕಲಿಸಲು ಹೋದ ಶಾಸ್ತ್ರಿಗಳು, ಹನ್ನೆರಡು ಗಂಟೆಗಳಾಗಿ ಹೋದರೂ ಇದುವರೆಗೆ ಮನೆಗೆ ಬಂದಿರಲಿಲ್ಲ. ಸರಸಮ್ಮನಿಗೆ ತುಂಬ ಕೋಪ ಬಂದು ಬಿಟ್ಟಿದ್ದಿತು. ಸಾಧ್ಯವಿದ್ದ ಮುಸುರೆಪಾತ್ರೆಗಳನ್ನೆಲ್ಲ ತೆಗೆದುಕೊಂಡು ಹೋಗಿ, ಅಕ್ಕಸದಿಂದಲೇ ಬಚ್ಚಲುಮನೆಯಲ್ಲಿ ಅಪ್ಪಳಿಸಿದರು. ' ಈ ಸಂಗೀತ ಎನ್ನುವುದು ಜಗತ್ತಿನಿಂದ ಎಂದು ಇಲ್ಲದಂತಾಗುವುದೋ, ಎಂದು ಅದರ ಶ್ರಾದ್ಧವಾದುದನ್ನು ನಾನು ನೋಡುವೆನೊ ! ' ಎಂದು ಒಟಗುಟ್ಟುತ್ತಲೆ, ಊಟದ ಮನೆಯಲ್ಲಿ ಮಣೆಯೊಂದನ್ನು ಧಪ್ಪೆಂದು ಚೆಲ್ಲಿದರು. ತಟ್ಟೆಯನ್ನು ಇರಿಸಿದ ಸಪ್ಪಳನ್ನು ಕೇಳಿದವರಿಗೆ, ಖಂಡಿತ ಅದರ ಆಯುಷ್ಯ ಇಂದು ಮುಗಿದಿರಲೇ ಬೇಕೆಂದು ಎನಿಸಬಹುದಾಗಿದ್ದಿತು. ತಲೆಬಾಗಿಲ ವರೆಗೆ ಬಂದು ಶಾಸ್ತ್ರಿಗಳ ಬರುವಿಕೆಯನ್ನು ಸರಸಮ್ಮ ನಿರೀಕ್ಷಿಸಿ ಹೋದುದೆಷ್ಟು ಸಲವೋ ಏನೋ ! ಕೊನೆಗೆ ಬೇಸತ್ತು ಬೇಗುದಿಗೊಳ್ಳುತ್ತ, ನಡುಮನೆಯಲ್ಲಿ ನೆಲದ ಮೇಲೆಯೆ ಆಕೆ ಬಿದ್ದುಕೊಂಡರು ; ಒಂದು ಸಲ ತಮ್ಮೊಳಗೆ ತಾವೆ ಗಟ್ಟಿಯಾಗಿ ನುಡಿದುಕೊಂಡರು :

" ಆ ಸುಡುಗಾಡುಮಾರಿಯ ಸುದರ್ಶನ ಹೊರಟು ಹೋದಾಗಿನಿಂದಲೂ ಹೀಗೆ ಮನೆಗೆ ಬರಲಿಕ್ಕೆ ಎಂದೂ ತಡವಾಗುತ್ತಿದ್ದಿಲ್ಲ. ಇಂದು ಮತ್ತೆ ಯಾಕೆ ತಡವಾಯಿತೋ ಯಾರು ಬಲ್ಲರು ? ಸುದರ್ಶನ ತಿರುಗಿ ಬಂದಿದ್ದಾನೋ ಏನೋ. . ಮತ್ತೆ ನನ್ನನ್ನು ಉರಿಸಿ ತಿನ್ನಲಿಕ್ಕೆ ! "

ಮಾತು ಮುಗಿದ ಮೇಲೆ ಸರಸಮ್ಮ ಏನನೊ ಸ್ವಲ್ಪ ವೇಳೆ ಯೋಚನೆ ಮಾಡಿದರು; ಆ ಮೇಲೆ ಮತ್ತೆ ತಮ್ಮ ಸ್ವಗತಭಾಷಣವನ್ನು ಪ್ರಾರಂಭಿಸಿದರು:

" ಇನ್ನೇತಕ್ಕೆ ಇಲ್ಲಿಗೆ ಬರುತ್ತಾನೆ ಸುದರ್ಶನ? ಅವನ ಆ ಸೋಗಲಾಡಿ ಉಷೆ ಇದ್ದರೆ ಇಲ್ಲಿಗೆ ಬರಬೇಕಲ್ಲವೆ? ಉಷೆ ಹೋಗಿ-ಬಿದ್ದಳು ಬಾಗಿಲುಕೋಟೆಯಲ್ಲಿ! ಖೋಡಿದೈವದ ಹುಡುಗಿ; ಸುಮ್ಮನೆ ಒಳ್ಳೆಯ ಮಾತಿನಿಂದ ಗಿರಿಧರನೊಡನೆ ಮದುವೆಯಾಗಲಿಕ್ಕೆ ಒಪ್ಪಿಕೊಂಡಿದ್ದರೆ ಆಗುತ್ತಿರಲಿಲ್ಲವೆ? ಯಾವುದನ್ನೂ ಬೇಡಿಬಂದಿರಬೇಕಲ್ಲವೆ.. ಪೂರ್ವಜನ್ಮದಲ್ಲಿ? ಉಷೆಗೆ ದೈವವಿದ್ದೂ ದರಿದ್ರತನ! ತನ್ನ ಘಾತ ತಾನೇ ಮಾಡಿಕೊಂಡಳು; ಬೇರೆಯವರದೇನು ತಪ್ಪು ಅದರಲ್ಲಿ!...."

ಸರಸಮ್ಮನ ಅರ್ಧ ಯೋಚನೆಯಲ್ಲಿಯು ಒಳಮಾತು, ಅರ್ಧ ಬಾಯಲ್ಲಿಯು ಗೊಣಗುಮಾತು ಹಾಗೆಯೆ ನಡೆದಿದ್ದಿತು. ಅಷ್ಟರಲ್ಲಿಯೆ ಶಾಸ್ತ್ರಿಗಳು ಮನೆಯೊಳಕ್ಕೆ ಬಂದ ಅಡಿಗಳ ಸಪ್ಪಳು ಕಿವಿಗೆ ಬಿದ್ದು, ಬಿದ್ದಲ್ಲಿಯೆ ಆಕೆ ಕೈಯೂರಿ ಎದ್ದು ಕುಳಿತರು. ನಸುವೆ ಕಡಿಮೆಯಾಗಿದ್ದ ರೋಷದ ಭಾವವನ್ನು ಮತ್ತೆ ಮುಖದ ಮೇಲೆ ಮೂಡಿಸಿಕೊಂಡರು. ಬಂದು ಎದುರು ನಿಂತ ಗಂಡನ ಕಡೆಗೆ ದುರುಗುಟ್ಟಿ ನೋಡುತ್ತ ಮಾತನಾಡಿದರು:

" ಅಂತೂ ಇಂದು ಮನೆಯಿದೆಯೆಂಬ ಜ್ಞಾಪಕ ಆಯಿತಷ್ಟೆ! ತಿನ್ನಿರಿ. ಇನ್ನು.. ಆರಿ ಅಗ್ಗರವಾದ ಅನ್ನ, ತಣ್ಣೀರಿನಂತಹ ಸಾರು! ಮಾಡಿದ ಬಿಸಿಯಿ ಅಡಿಗೆ ಬಾಯಲ್ಲಿ ಬೀಳಲಿಕ್ಕೂ ಬೇಡಿಕೊಂಡು ಬಂದಿರಬೇಕಾಗುತ್ತದೆ.. ದೇವರ ಬಳಿಯಲ್ಲಿ!"

ಎಂದು ನುಡಿಯುತ್ತಲೆ ಸರಸಮ್ಮ ಮೇಲಕ್ಕೆ ಎದ್ದರು. ಕೈಕಾಲು-ತೊಳೆದುಕೊಳ್ಳಲಿಕ್ಕೆಂದು ಒಂದು ತಂಬಿಗೆ ನೀರನ್ನು ತಂದು ಇರಿಸಿದರು. ಶಾಸ್ತ್ರಿಗಳವರು ಒಂದೂ ಮಾತನ್ನಾಡದೆ, ಕೈಕಾಲನ್ನು ತೊಳೆದುಕೊಂಡು ಒಳಗೆ ಬಂದು ಮಣೆಯ ಮೇಲೆ ಕುಳಿತರು; " ಹುಂ ಬಡಿಸು ಬೇಗ; ತುಂಬಾ ಹಸಿವೆ! " ಎಂದರು.

ಸರಸಮ್ಮ ಅನ್ನದ ತಪ್ಪೇಲಿ ನೋಡಿದರು; ತಣ್ಣಗಾಗಿ ಹೋದ ಸಾರನ್ನು ನೋಡಿದರು. ಸಿಡಿನುಡಿಗಳಲ್ಲಿಯೆ ಹೇಳಿದರು:

" ಹನ್ನೆರಡು ಗಂಟೆಯಾಗುವ ವರೆಗೆ ಬೀದಿ ಬೀದಿ ಅಲೆದಾಡಿರಿ! ಈಗ ಹಸಿವೆಯಾಗಿದೆಯಂತೆ ಹಸಿವೆ! ಈ ಸುಟ್ಟ ಅನ್ನ ಸಾರು ಎರಡೂ

ಆರಿಹೋಗಿವೆ. ಹೊತ್ತು ಆಗುವದು ಆಗಿದೆ; ಇನ್ನೊಂದು ಹತ್ತು ನಿಮಿಷ ತಡೆಯಿರಿ! ಬೇರೆ ಬಿಸಿಯನ್ನ ಮಾಡಿ ಊಟಕ್ಕೆ ಬಡಿಸುತ್ತೇನೆ; ಸಾರನ್ನೂ ಇನ್ನಿಷ್ಟು ಬಿಸಿಯಾಗಿ ಮಾಡುತ್ತೇನೆ!"

ಶಾಸ್ತ್ರಿಗಳ ಬಾಡಿದ ಮುಖದಲ್ಲಿಯೂ ಎಂತಹದೋ ಒಂದು ನಗೆ ಮಿನುಗಿತು; ಹೆಂಡತಿಗೆ ಹೇಳಿದರು :

"ಬೇಡವೆ! ಇನ್ನೆಲ್ಲಿ ಮತ್ತೆ ಬಿಸಿಯನ್ನ ಮಾಡುತ್ತೀಯೆ! ಇದ್ದಂತಹದನ್ನು ಹಾಕಿದರಾಗದೆ?"

"ಅದೇನೂ ಬೇಡ!" ಎಂದು ಸರಸಮ್ಮ ಸಣ್ಣ ಪಾತ್ರೆಯೊಂದರಲ್ಲಿ ಅನ್ನಕ್ಕೆ ಇರಿಸಿಯೆ ಬಿಟ್ಟರು. ಶಾಸ್ತ್ರಿಗಳು ಕೇಳಿದರು :

"ಅಷ್ಟು ಸಾಕಾಗುವುದೇ ಅನ್ನ?"

"ಒಬ್ಬರಿಗೆ ಇನ್ನೆಷ್ಟು ಬೇಕು ಹಾಗಾದರೆ? ಒಂದು ಸೇರಿನ ತಪ್ಪೇಲಿಯನ್ನೇ ಏರಿಸಲೇನು?"

"ಒಬ್ಬರಿಗೇ ಏಕೆ? ನಿನಗೆ ಬೇಡವೆ ಬಿಸಿಯನ್ನ?"

"ಸರಿ, ನನಗೆ ಬಿಸಿಯನ್ನವಂತೆ! ಈಗ ಮಾಡಿದುದನ್ನೇನು ಕೆಡಿಸುವುದಿದೆಯೆ? ತಂಗುಳನ್ನವುಂಡರೆ ನನಗೇನು ಧಾಡಿಯಾಗಬೇಕಾಗಿದೆ?"

ಶಾಸ್ತ್ರಿಗಳು ಹಿಗ್ಗಿದೆದೆಯಿಂದ ಹೆಂಡತಿಯು ಕಡೆಗೆ ನೋಡಿದರು; ಮುಗುಳುನಗೆ ನಗುತ್ತ ಹೇಳಿದರು:

"ಮುಳ್ಳುಗಳ್ಳಿಯ ಕೊಂಪೆ; ಒಳಗೆ ಎಲ್ಲಿಯೊ ಸವಿಯಾದ ಜೇನು! ನಿಸರ್ಗದೊಂದು ವೈಚಿತ್ರ್ಯವೆ! ಜನರು ಜೇನಿನ ಆಶೆಯಿಂದ ಮುಳ್ಳು-ಗಳ್ಳಿಯ ಗೆಳೆತನ ಕೂಡ ಮಾಡಬೇಕಾಗುವ ಸಂದರ್ಭಬರುವುದು!"

"ಸಾಕು, ಯಾವಾಗಲೂ ಈ ಹಾಳು ಒಗಟದಂತಹ ಮಾತೇ ಮಾತು! ಬೇರೆ ಒಳ್ಳೆಯ ಮಾತಿಲ್ಲ—ಕಥೆಯಿಲ್ಲ!"

ಸರಸಮ್ಮ ಅಡಿಗೆಯಲ್ಲಿ ತೊಡಗಿದರು; ಶಾಸ್ತ್ರಿಗಳು ಕುಳಿತಲ್ಲಿಯೆ ಕುಳಿತಿದ್ದರು. ಎರಡು-ಮೂರು ನಿಮಿಷಗಳಾದ ಮೇಲೆ ಶಾಸ್ತ್ರಿಗಳು ಹೆಂಡತಿಯೊಂದಿಗೆ ಮಾತನ್ನು ಪ್ರಾರಂಭಿಸಿದರು:

"ನೋಡು, ನನಗೆ ಮನೆಗೆ ಬರಲಿಕ್ಕೆ ಇಂದು ಏಕೆ ತಡವಾಯಿತು ಗೊತ್ತೇ?"

"ಗೊತ್ತಿರದೆ ಏನು? ಎಲ್ಲಿಯಾದರೂ ಕುಳಿತಿದ್ದೀರಿ ಆ ಹಾಳು ಸಂಗೀತ ಕಿರಿಚಿಕೊಳ್ಳುತ್ತ!"

"ಛೇ ಛೇ! ಸಂಗೀತವೆಲ್ಲಿಯದು; ಹೋಳಿಗೆಯೊಂದನ್ನು ಗೊತ್ತು ಮಾಡಿ ಬರಬೇಕಾದರೆ ತಡವಾಯಿತು!"

"ಹೋಳಿಗೆ..? ಎಲ್ಲಿಯ ಹೋಳಿಗೆ..? ಯಾರ ಹೋಳಿಗೆ..?"

"ಗಿರಿಧರನ ಮದುವೆ ಗೊತ್ತಾಯಿತು!"

"ಆಂ! ಗೊತ್ತಾಯಿತೇ? ಕನ್ಯೆ ಯಾರು?"

"ಬೇರೆ ಯಾರಿರಬೇಕು; ನಿನ್ನ ಪ್ರಭೆ ಇದ್ದಾಳಲ್ಲವೆ?"

"ಪ್ರಭೆಯೆ ಅಹುದೇನು? ನಮ್ಮಪ್ಪಾ ಮುಖ್ಯಪ್ರಾಣಾ, ನಿನಗೆ ಜೋಡು ತೆಂಗಿನಕಾಯಿ ಒಡೆಯಿಸುತ್ತೇನೆ ನೋಡು! ಸರಿ, ಕೊನೆಗೂ ಗಿರಿಧರ ಪ್ರಭೆಯನ್ನು ಮದುವೆಯಾಗಲಿಕ್ಕೆ ಒಪ್ಪಿದನೆನ್ನಿ ಹಾಗಾದರೆ!"

"ಅವನೇನು ಒಪ್ಪುತ್ತಾನೆ; ಎಲ್ಲರೂ ಸೇರಿ ಒಪ್ಪಿಸಿದರು. ಯಶೋದಮ್ಮನಿಗೆ ಮಗನ ಮದುವೆ ಬೇಗನೆ ಮಾಡಬೇಕೆಂದು ಹುಚ್ಚು; ಶಾರದಮ್ಮನಿಗೆ ಗಿರಿಧರನನ್ನೇ ಅಳಿಯನನ್ನಾಗಿ ಮಾಡಿಕೊಳ್ಳಬೇಕೆಂದು ಹುಚ್ಚು. ಈ ಇಬ್ಬರು ಹೆಂಗುಸರ ಹುಚ್ಚಿನ ಬಲೆಗೆ ಎಲ್ಲರೂ ಸಿಕ್ಕಲೆ ಬೇಕಾಯಿತು. ಪ್ರಭೆಯನ್ನು ಮದುವೆಮಾಡಿಕೊಳ್ಳಲಿಕ್ಕೆ ಒಪ್ಪಿಸಬೇಕಾದರೆ ಯಶೋದಮ್ಮ ಕರುಣಾಕಾವ್ಯವನ್ನೇ ಗಿರಿಧರನೆದುರು ಓದ-ಬೇಕಾಯಿತು. ಶಾರದಮ್ಮನಂತೂ 'ನೀನು ಮದುವೆ ಮಾಡಿಕೊಳ್ಳದಿದ್ದರೆ ನಾನು ಉಪವಾಸಸತ್ಯಾಗ್ರಹ ಮಾಡುತ್ತೇನೆ!' ಎಂದು ನಿಷ್ಠುರವಾಗಿ ಹಟವನ್ನೆ ಹಿಡಿದಿದ್ದರು. ಅಪ್ಪಣರಾಯರು ಗಿರಿಧರನ ಮನಸ್ಸನ್ನು ಒಲಿಸುವಂತೆ ನನ್ನನ್ನು ಬೇಡಿಕೊಳ್ಳಲು ತೊಡಗಿದರು. ಏನೇನೋ ಮಾತಿನ ಮಲಕುಗಳನ್ನು ಒಡ್ಡೊಡ್ಡಿ, ಯಾವುಯಾವುವೋ ಆಶೆಗಳನ್ನು

ಆತನಿಗೆ ಹಚ್ಚಿ, ಪ್ರಭೆಯೊಂದಿಗೆ ಮದುವೆಯಾಗಲಿಕ್ಕೆ ಹೇಗೋ ಗಿರಿಧರನಿಂದ ಒಪ್ಪಿಗೆ ಪಡೆದಿದ್ದೇನೆ. ದೇವರು ಅವರಿಬ್ಬರ ವೈವಾಹಿಕ ಜೀವನವನ್ನು ಸುಖಾಂತವಾಗಿಸಬೇಕು.. ಇಷ್ಟೆ!"

ಸರಸಮ್ಮ ತಮ್ಮ ಅನುಭವದ ಅಳೆಗೋಲಿನಿಂದ ಅಳೆದು ಹೇಳಿದರು:

"ಮದುವೆಯಾದ ಮೇಲೆ ಎಲ್ಲವೂ ಸರಿಹೋಗಿಬಿಡುತ್ತದೆ! ಒಮ್ಮೆ ಕೈ ಹಿಡಿದ ಮೇಲೆ ಆಯಿತು; ಎಂತಹ ಗಂಡ-ಹೆಂಡಿರೂ ಕೂಡಿ ಸಂಸಾರ ಸಾಗಿಸಿಯೆ ಸಾಗಿಸುತ್ತಾರೆ!"

ವಿನೋದದ ಸ್ವರದಲ್ಲಿ ಶಾಸ್ತ್ರಿಗಳು ಹೇಳಿದರು:

"ನಮ್ಮಿಬ್ಬರ ಸಂಸಾರವು ಅದಕ್ಕೆ ಪ್ರತ್ಯಕ್ಷವಾದ ಉದಾಹರಣೆ!"

"ದೇವರು ಬಾಯಿ ಕೊಟ್ಟಿದ್ದಾನೆ; ಬೇಕಾದ ಹಾಗೆ ಎಂದು-ಕೊಳ್ಳಿರಿ! ಅದೆಲ್ಲಾ ಹೋಗಲಿ, ಗಿರಿಧರ ಪ್ರಭೆಯನ್ನು ಮದುವೆಯಾಗಲಿಕ್ಕೆ ಒಪ್ಪಿದನಲ್ಲವೆ?"

"ಒಪ್ಪದೇನು ಮಾಡುತ್ತಾನೆ? ಉಷೆಯನ್ನು ಲಗ್ನವಾಗುವಂತಿಲ್ಲವೆಂದು ಆತನ ಪ್ರತಿಜ್ಞೆ, ತಾಯಿ-ತಂದೆಗಳು ಈ ವರ್ಷ ಮದುವೆ ಮಾಡಿಯೆ ಬಿಡಬೇಕೆಂದು ಆತುರಪಡುತ್ತಲಿದ್ದಾರೆ. ಮದುವೆಯಾಗುವುದೇ ಆದರೆ ಕನ್ಯೆಯೊಂದಂತೂ ಬೇಕೇಬೇಕು. 'ಗುರುತು-ಪರಿಚಯವಿರದ ಹೊರಗಿನ ಕನ್ಯೆಯನ್ನು ಮಾಡಿಕೊಳ್ಳುವುದಕ್ಕಿಂತ, ಮೊದಲಿನಿಂದಲೂ ನಿನ್ನನ್ನು ಮನವಾರೆ ಪ್ರೀತಿಸುತ್ತಿರುವ ಪ್ರಭೆಯನ್ನೇ ಏಕೆ ಮಾಡಿಕೊಳ್ಳಬಾರದು?' ಎಂದು ಗಿರಿಧರನೆದುರು ನಾನು ತರ್ಕ ನಡೆಯಿಸಿದೆ. 'ಇಲ್ಲ' 'ಆಗಲಿ' ಎನ್ನುತ್ತ ಕೊನೆಗೆ ಆಗಬಹುದೆಂಬ ವಚನವನ್ನೇನೋ ಕೊಟ್ಟಿದ್ದಾನೆ!"

"ಪ್ರಭೆಯ ದೈವ ತೆರೆದಂತಾಯಿತು! ಪುಣ್ಯವಂತನ ಗಿರಿಧರನದು! ಬಂಗಾರದಂತಹ ಪ್ರಭೆಯನ್ನು ಬಿಟ್ಟು, ಆ ಕಂಗಾಲ ಉಷೆಯಲ್ಲಿ ಯಾವ ಚೆಲುವು-ಚೆದುರುಗಳನ್ನು ಕಂಡು ಮೆಚ್ಚಿದ್ದನೋ ಏನೋ!"

ಶಾಸ್ತ್ರಿಗಳು ತಿರಸ್ಕಾರ-ಕಳವಳಗಳನ್ನು ಹೊರಕ್ಕೆ ಹಾಕುವಂತಹ ನಗೆಯೊಂದನ್ನು ನಕ್ಕುಬಿಟ್ಟರು; ಮಾತನ್ನೇನೂ ಆಡಲಿಲ್ಲ.

ಬಿಸಿಯನ್ನವಾಯಿತು. ಸರಸಮ್ಮ ಅನ್ನವನ್ನು ಕೆದರಿ ಶಾಸ್ತ್ರಿಗಳ ಎಲೆಯಲ್ಲಿ ಹಾಕಿದಳು. ಬಳಿಕ ಬಿಸಿಯನ್ನದ ತಲೆಯ ಮೇಲೆ ಹಾಕಿದ ಬೆಣ್ಣೆ ಕಾಯಿಸಿದ ತುಪ್ಪವು, ಶಾಸ್ತ್ರಿಗಳ ರಸಿಕಹೃದಯದ ಕಣ್ಣಿಗೆ ಸರಸಮ್ಮನ ಸ್ನೇಹರಸವಾಗಿಯೆ ಕಂಡಿರಬಹುದು.

---

## ೨೩ನೆಯ ಪರಿಚ್ಛೇದ

ಯಾವಾಗಲೂ ಸಂತೋಷದಿಂದಿರಬೇಕೆಂದು ಬಯಸುತ್ತಿರುವ ಮಾನವನು, ಆಗಿಹೋದ ದುಃಖದ ಸಂಗತಿಯನ್ನೇ ಅಂಟಿಕೊಂಡು ಅಳುತ್ತ ಕುಳಿತಿರುವುದಿಲ್ಲವೆಂಬುದು ಎಲ್ಲರೂ ಕಂಡುಂಡ ಮಾತು. ಬೆಳಗಿನಲ್ಲಿ ಸತ್ತುಬಿದ್ದಿದ್ದ ತಂದೆಯ ಮುಂದೆ ಕುಳಿತು ಅಳುತ್ತಿರುವ ಮನುಷ್ಯನು, ಸಂಜೆಗೆ ಹೊಸತಾಗಿ ಹುಟ್ಟಿದ ಹಸುಮಗುವಿನ ತಂದೆಯಾಗಿ ಹಿಗ್ಗಿನಿಂದ ನಗುತ್ತಾನೆ. 'ದೇಹವೆರಡು ಜೀವವೊಂದು, ಎಂಬಂತೆ ಇರುವ ಪತಿದೈವತವನ್ನು ಕಳೆದುಕೊಂಡು ಕುದಿಯುತ್ತ ಕುಳಿತ ಗರತಿಯು, ತನ್ನ ಮಗನು ಆಡುತ್ತಿರುವ ಚಕ್ಕಂದದ ಚಿನ್ನಾಟವನ್ನು ಕಂಡು, ಮುಗುಳುನಗೆಯನ್ನು ತಳೆಯುತ್ತಾಳೆ. ಅಗಲಿದ ಕರುಳಿಗಾಗಿ ಕೊರಗಿ ಕಣ್ಣೀರನ್ನು ಇಡುತ್ತಿದ್ದ ತಾಯಿ, ಬಸಿರಿನಲ್ಲಿರುವ ಭವಿಷ್ಯತ್-ಸಂತಾನವನ್ನು ನೆನೆದು ಸಮಾಧಾನವನ್ನು ಹೊಂದುತ್ತಿರುತ್ತಾಳೆ. ಬದುಕು ವ್ಯಾವಹಾರಿಕ ಸುಖ-ದುಃಖಗಳಿಂದ ತುಂಬಿದುದು; ಎಂದ-ಮೇಲೆ, ಒದಗಿದ ದುಃಖವೊಂದೇ ಒಂದನ್ನು ನೆನೆದು ಹಲುಬಿ ಹಂಬಲಿಸುತ್ತ ಕುಳಿತುಬಿಟ್ಟರೆ ಜಗನ್ನಾಟಕವು ಹೇಗೆ ನಡೆಯಬೇಕು?

ಇಂದು ಅಪ್ಪಣರಾಯರ, ಯಶೋದಮ್ಮನವರ ಸಂತೋಷಕ್ಕೆ ಆಳತೆಯಿಲ್ಲ, ಸೀಮೆಯಿಲ್ಲ. ಅವರ ಆನಂದದ ಆಳವಾದ ಕಡಲಲ್ಲಿ ಸುದರ್ಶನ-ಉಷೆಯರ ನೆನಪು ಎಲ್ಲಿ ಮುಳುಗಿಹೋಗಿದ್ದಿತೇನೊ! ವ್ಯವಹಾರಪ್ರಿಯನಾದ ಮನುಷ್ಯನಿಗೆ ಆನಂದದ ಅತಿಶಯತೆಯ ದಿನಗಳು ಮೂರೇಮೂರು— ಎಂದು ಅನುಭವಿಕರು ಹೇಳುತ್ತಾರೆ.

ಒಂದು ತನ್ನ ಮದುವೆಯ ದಿನ; ಇನ್ನೊಂದು ಮೊದಲ ಮಗುವನ್ನು ಪಡೆದ ದಿನ; ಮೂರನೆಯದು ತನ್ನ ಮಗನ ತಲೆಯ ಮೇಲೆ ಮದುವೆಯ ಅಕ್ಷತೆಗಳು ಬೀಳಲಿರುವ ದಿನ. ಅಪ್ಪಣರಾಯರಿಗೂ ಯಶೋದಮ್ಮನಿಗೂ ಇಂದು ಈ ಮೂರನೆಯ ಆನಂದದ ದಿನ. ಪ್ರಭಾ-ಗಿರಿಧರರ ತಲೆಯ ಮೇಲೆ ಅಕ್ಷತೆಗಳನ್ನು ಹಾಕಿ, ಆನಂದಾಶ್ರುಗಳು ತುಂಬಿದ ಕಣ್ಣುಗಳಿಂದ ವಧೂವರರನ್ನು ನೋಡಿ ನೋಡಿ, ಹಿಗ್ಗಿದೆದೆಯಿಂದ ಹಲವು ಹಲವು ಮಂಗಲಾಶೀರ್ವಾದಗಳನ್ನು ಮಾಡಿ ಮಾಡಿ, ತಣಿಯಲಾರದವರಾಗಿದ್ದರು. ಯಶೋದಮ್ಮನವರ ಮನವನ್ನು ಮಾತ್ರ, ಉಷಾ-ಸುದರ್ಶನರು— ಅಂತಹ ಆನಂದಸಮಯದಲ್ಲಿಯೂ— ಒಂದೆರಡು ಸಲ ಕಲಕುಮುಲಕು ಮಾಡಿ ಉಸಿರು ಹಾಕಿಸದೆ ಬಿಡಲಿಲ್ಲ.

ಗಿರಿಧರನು ಮದುವೆಯಾಗಿ ಹಸೆಯಮೇಲೆ ನಿಂತಾಗ, ನಡುವೆ ಹಿಡಿದ ಅಂತಃಪಟದ ಆಚೆಗೆ ನಿಂತ ಪ್ರಭೆಯ ಮುಖವನ್ನು— ಈ ಮೊದಲು ತಾನು ಎಷ್ಟೋ ಸಲ ನೋಡಿದವನಾದರೂ— ಉಷೆಯ ಮುಖದ ಚಿತ್ರವನ್ನಾಗಿ ಭಾವಿಸಿ, ಮನಸ್ಸಿನ ಪಟದ ಮೇಲೆ ಬರೆದುಕೊಳ್ಳುವನು; ಮತ್ತೆ 'ಉಹೂಂ' ಎಂದು ತಲೆಯನ್ನು ಅಲ್ಲಾಡಿಸಿ, ಬರೆದ ಚಿತ್ರವನ್ನು ಅಳಿಸಿ, ತನಗೆ ಪರಿಚಿತವಾದ ಪ್ರಭೆಯ ಮುಖವನ್ನು ಬರೆಯುವುದಕ್ಕೆ ಹವಣಿಸುವನು. ಉಷೆಯ ಮುಖವನ್ನು ಕಂಡಾಗ ಆತನ ಮುಖವು ಅರಳುವುದು; ಪ್ರಭೆಯ ಮುಖವನ್ನು ಕಂಡಾಗ ಕೆರಳುವುದು. ಅಂತಃಪಟದ ತೆರೆಯು ತೆರೆದು, ಪ್ರತ್ಯಕ್ಷವಾದ ಪ್ರಭೆಯ ಮುಖವು ಕಣ್ಣಿಗೆ ಬಿದ್ದಾಗ, ಗಿರಿಧರನ ಮುಖವು ತಾನಾಗಿ ಮುದುಡಿಕೊಂಡಿತು. ಪುರೋಹಿತರು ಮಾಡಿಸುತ್ತಿದ್ದ ವಿವಾಹವಿಧಿಗಳನ್ನವನು ಕೇವಲ ಯಂತ್ರದಂತೆ ಮಾಡುತ್ತಿದ್ದನು. ತಾನೇನು ಮಾಡುತ್ತಿರುವೆನು? ಎಲ್ಲಿ ಕುಳಿತಿರುವೆನು?— ಎಂಬುದರ ಅರಿವು ಗಿರಿಧರನಿಗಿದ್ದಿತೋ ಇಲ್ಲವೋ, ಆತನಿಗೊಬ್ಬನಿಗೇ ಗೊತ್ತು. ಹೊಸತಾಗಿಯೆ— ಎಂದೂ ನೋಡದವನನ್ನು— ನೋಡುವಂತಹ ಆತುರದ ಓರೆಗಣ್ಣಿನಿಂದ ಆಗಾಗ ನೋಡುತ್ತಿರುವ ಪ್ರಭೆಯ ನೋಟವು, ಒಮ್ಮೆಯಾದರೂ ಗಿರಿಧರನ ಕಣ್ಣಿಗೆ ಬಿದ್ದಿತೊ ಇಲ್ಲವೊ ಎಂಬುದು ಸಂಶಯದ ಮಾತು.

ಪ್ರಭೆಯ ತಂದೆಯ ಮನೆಯಲ್ಲಿಯೆ ಲಗ್ನ. ತಮಗಿದ್ದ ಒಬ್ಬಳೇ ಒಬ್ಬಳು ಮಗಳ ಮದುವೆಯನ್ನು ತುಂಬ ವಿಜೃಂಭಣೆಯಿಂದ ಮಾಡಿ, ಜನರಿಂದ 'ಹೌದು ಹೌದು' ಎಂದು ಹೊಗಳಿಸಿಕೊಳ್ಳಬೇಕೆಂದು ಪ್ರಭೆಯ ತಂದೆ-ತಾಯಿಗಳ ಮನಸ್ಸು. ಯಾವುದರಲ್ಲಿಯೂ ಕೊರತೆಯಾಗಗೊಡಬಾರದೆಂಬುದು ಅವರ ನಿಶ್ಚಯ. ಪ್ರಭೆಯ ಅಣ್ಣ ರಾಮುವಿನ ಮನಸ್ಸೂ ಕೊಂಚ ಧಾರಾಳವಾದುದೆ; ಎದಮೇಲೆ ಹರಿಯುತ್ತಿರುವ ಹಣದ ಹೊಳೆಗೆ ತಡೆಯು ಯಾಟವಿರಬೇಕು ! ಮಂಗಲಮಂಟಪಕ್ಕಾಗಿಯೇ ಸಾವಿರಾರು ರೂಪಾಯಿಗಳ ವೆಚ್ಚವಾಗಿರಬಹುದು.

* * * *

ಲಗ್ನಕಾಲದಲ್ಲಿ ಸೂಳೆಯರ ಮೇಳಕ್ಕೂ ಔತಣವಿದ್ದಿತು. ಗೋಮಾಂತಕ ಪ್ರಾಂತದಿಂದ ಬಂದು, ಪಟ್ಟಣದಲ್ಲಿ ನೆಲಸಿದ ಶ್ಯಾಮಾಸಾನಿಯ ಹೆಸರನ್ನು ಬಹುಜನರು ಕೇಳಿಬಲ್ಲರು. ಆಕೆಯ ಮಗಳು ಅವಂತಿಕೆ ಇಪ್ಪತ್ತು ವರುಷದ ನವಯುವತಿ. ಶ್ಯಾಮಾಸಾನಿ ಆಕೆಗೆ ಹಿಂದುಸ್ತಾನಿ ಸಂಗೀತವನ್ನೂ ನರ್ತನವನ್ನೂ ತುಂಬ ವೆಚ್ಚಮಾಡಿ ಕಲಿಸಿದ್ದಳು. ಅವಳನ್ನು ಕರೆಯಿಸುವುದೆಂದರೆ ಸರ್ವಸಾಧಾರಣರಾದ ಸಿರಿವಂತರ ಎದೆಯೂ ನಡುಗಬಹುದು—ಅಷ್ಟೊಂದು ಹಣವನ್ನು ಸುರಿಯಬೇಕು. ಇಂದು ಆ ಅವಂತಿಕೆಯ ಗಾಯನ-ನರ್ತನಗಳಿಂದಲೇ ಮದುವೆಯ ಮಂಟಪವು ಅಭಿರಾಮಕವಾಗಬೇಕಾಗಿದ್ದಿತು.

ಅಕ್ಷತಾರೋಪಣವಾದೊಡನೆ ಮದುವೆಯ ಕಾರ್ಯದಲ್ಲಿ ಇನ್ನುಳಿದವರಿಗೇನು ಕೆಲಸ ? ವಧೂ-ವರರು, ಪುರೋಹಿತರು, ಹೋಮಾಗ್ನಿ, ಹವಿಸ್ಸು ಇಷ್ಟಾದರೆ ಆಯಿತು.

ಹಸೆಯ ಜಗುಲಿಗೆ ಎದುರಾಗಿ ದೊಡ್ಡದೊಂದು ದಿವಾನ್‌ಖಾನೆ. ಅಲ್ಲಿ ಅವಂತಿಕೆಯ ಗಾಯನ-ನರ್ತನದ ಸಿದ್ಧತೆಯು ನಡೆಯಿತು. ಕೂಡಿದ ಜನರೆಲ್ಲರೂ ನಾನು ಮುಂದೆ ತಾನು ಮುಂದೆ ಎಂದು ಕಾದಾಡಿ, ದಿಂಬಿಗೆ ಒರಗಿಕೊಂಡು ಕುಳಿತ ದೊಡ್ಡ ಹೊಟ್ಟೆಯ ಜನರ ತಿರಸ್ಕಾರಕ್ಕೆ

ಗುರಿಯಾದರು. ಎಲ್ಲರೂ ತಮ್ಮ ತಮ್ಮ ಸ್ಥಳದ ಮೇಲೆ ಕುಳಿತು ಸಭೆಯಲ್ಲಿ ಸಮಾಧಾನವು ನೆಲೆಗೊಳ್ಳಬೇಕಾದರೆ, ಏಳೆಂಟು ನಿಮಿಷಗಳ ಕಾಲ ಹೊರಟು ಹೋಯಿತು.

ಉತ್ತರದೇಶದ ಸಾರಂಗಿಯವರಿಬ್ಬರು ಅಕ್ಕಪಕ್ಕಕ್ಕೆ ಕುಳಿತುಕೊಂಡು, ಹಾಗೊಮ್ಮೆ ಹೀಗೊಮ್ಮೆ ಸಾರಂಗಿಯ ಮೇಲೆ ಬಿಲ್ಲುಗಳನ್ನು ಎಳೆದರು. ಸಂಮೋಹನ ಮಂತ್ರವನ್ನು ಊದಿದಂತೆ ಸಭೆಯಲ್ಲಿ ಎಲ್ಲೆಲ್ಲಿಯೂ ನಿಶ್ಶಬ್ದತೆ ನೆಲೆಗೊಂಡಿತು. 'ಧರ್ಮೇಚ ಅರ್ಥೇಚ ಕಾಮೇಚ ನಾತಿಚರಾಮಿ' ಎಂದು ಹೇಳಿ ಗಿರಿಧರನಿಂದ ಪ್ರತಿಜ್ಞೆ ಮಾಡಿಸುತ್ತಿದ್ದ ಪುರೋಹಿತರೂ ಸಾರಂಗಿಯ ಸುನಾದಕ್ಕೆ ಮನಸೋತವರಾಗಿ, ಹಾ-ಗೇ ಸ್ವಲ್ಪ ಹೊರಳಿ ನೋಡಿದರು. ಗಿರಿಧರನ ಕಿವಿಗಳು ನಿಮಿರಿನಿಂತುವು. ಮೃದಂಗದವನು 'ಧಿ ಕ್ ತ್ರಂವ್ ತ್ರಂವ್ ' ಎಂದು ಛಾಪುಹಾಕಿದನು; ಗಿರಿಧರನ ಮನಸ್ಸು ಕುಣಿದಾಡಿತು. 'ಮೊದಲು ನರ್ತನವೋ? ಗಾಯನವೋ?' ಎಂದು ದೊಡ್ಡ ದೊಡ್ಡವರಲ್ಲಿ ಚರ್ಚೆನಡೆದು, ಮೊದಲು ನರ್ತನವೇ ನಡೆಯಬೇಕೆಂದು ನಿರ್ಣಯವಾಯಿತು.

ಕಾಲಿಗೆ ಗೆಜ್ಜೆಗಳನ್ನು ಕಟ್ಟಿಕೊಂಡು ಅವಂತಿಕೆಯು ಎದ್ದುನಿಂತಳು. ಬೆಳುಗೆಂಪುಬಣ್ಣದ ಅಮೃತಶಿಲೆಯ ಬೊಂಬೆಯಂತಹ ಮೈಬಣ್ಣ. ಕೊಂಚ ಉದ್ದನೆಯದಾದರೂ ತುಂಬಿದ ಮುಖ. ಹುಸಿಲಜ್ಜೆಯ ಕಿರುನಗೆಯು ಚೆಂದುಟಿಗಳಿಗೆ ಮುತ್ತಿಟ್ಟಿದೆ. ಕೆಳಗಿವಿಯ ನೀಲರತ್ನದ ಲೋಲಕಗಳು, ಕೆನ್ನೆಗಳ ಮೆರುಗನ್ನು ಹೆಚ್ಚಿಸುತ್ತಲಿವೆ. ಕಣ್ಣಾಲಿಗಳ ಹೊಳಪು ಮೂಗುಬೊಟ್ಟಿನ ವಜ್ರದ ಹೊಳಪನ್ನು ಹಿಂದೂಡುತ್ತಲಿದೆ. ಸುರುಳಿ ಸುರುಳಿಯಾದ ಮುಂಗುರುಳು ಅರಳಿಕೊಂಡು ನಿಲ್ಲುವಂತೆ—ಚಾತುರ್ಯದಿಂದ ಬಾಚಿಕಟ್ಟಿಕೊಂಡಿದ್ದ ಮುಡಿ; ಅಳ್ಳೆದೆಯವರ ಮನವನ್ನು ಝಲ್ಲೆನ್ನಿಸುವ ಬೇಸಗೆಯ ಮಲ್ಲಿಗೆಯರಳ ತುಂಬುದಂಡೆ ಮುಡಿಯನ್ನು ಸುತ್ತಿಕೊಂಡಿದೆ. ತಾರಕೆಗಳನ್ನಿಟ್ಟು ನೆಯ್ದಂತಹ—ಜರಿಯ ಹೂವಿನ—ಮುಗಿಲುಬಣ್ಣದ ಪತ್ತಲವನ್ನುಟ್ಟಿದ್ದಾಳೆ. ತೊಟ್ಟಿದು ಕೇಸರೀವರ್ಣದ ರೇಶಿಮೆಯ ತುಂಡುದೋಳಿನ ಕುಪ್ಪುಸ. ಕುಪ್ಪುಸದ ತೋಳಿನ

ಜರಿಯ ಪಟ್ಟೆಯ ಕುಸುರುಗಳು, ಹೆಗಲನ್ನು ದಾಟಿ ಎರಡಂಗುಲಗಳ ವರೆಗೇನೂ ಇಳಿದಿರಲಿಲ್ಲ. ಪುಷ್ಟವಾಗಿದ್ದರೂ ಲತೆಯಂತೆ ಬಳುಕುವ ದೇಹ. ಜರಿದು ಹೊರಟಿರುವ ಎದೆಯ ಸೆರಗನ್ನು ಸರಿಮಾಡಿಕೊಳ್ಳು ತಿರುವಾಗ, ದುಂಡುದೋಳನ್ನು ಅಲಂಕರಿಸಿದ– ಸುಂದರವಾದ– ಬಾಹುಪೂರವು ಕಣ್ಣುಗಳನ್ನು ಸೆಳೆಯುತ್ತಿದ್ದಿತು. ಮುಂಗೈಯಲ್ಲಿ ಅಂದ ವಾದ ಎರಡೆರಡು ಚಿನ್ನದ ಬಳೆಗಳು. ಕೊರಳಲ್ಲಿ ರನ್ನದ ಮಧ್ಯಪದಕವಿದ್ದ ಚಂದ್ರಹಾರ; ಕತ್ತಿಗೆ ಹೊಂದಿಯೊಂದು ಕಿರುಮುತ್ತಿನ ಕಂಠಿ. ಅವಂತಿಕೆ ಯನ್ನು ಮೊದಲ ಸಲ ನೋಡಿದೊಡನೆ ಮುಂಗಾರುಮಿಂಚನ್ನು ನೋಡಿ ದಂತೆ, ಅದೆಷ್ಟು ಜನರ ಎದೆ ಝುಗ್ಗೆಂದಿತೋ! ಆಕೆಯನ್ನು ನೋಡುವುದ ರಲ್ಲಿ ಮಗ್ನನಾದ ಗಿರಿಧರನಿಗೆ, ಪುರೋಹಿತರು ಹೇಳುತ್ತಿದ್ದ ಮಂತ್ರ ಗಳನ್ನು ತಾನೂ ಹೇಳಬೇಕೆಂಬುದರ ಎಚ್ಚರವೆ ಉಳಿದಿರಲಿಕ್ಕಿಲ್ಲ.

ಸಾರಂಗಿಯವರು 'ಮಾಂಡ'ರಾಗದಲ್ಲಿ—ನರ್ತನಕ್ಕನುಕೂಲವಾದ ಗೀತೆಯೊಂದನ್ನು ನುಡಿಸಲಿಕ್ಕೆ ಪ್ರಾರಂಭಿಸಿದರು. ಮೃದಂಗದ ತಾಳಕ್ಕೆ ಸರಿಯಾಗಿ ಅವಂತಿಕೆಯ ಕಾಲಗೆಜ್ಜೆಗಳೂ ಶಬ್ದವನ್ನು ಮಾಡುವುದಕ್ಕೆ ತೊಡಗಿದುವು. ವಿಧವಿಧದ ಕುಣಿತ–ಮಣಿತ–ಬವರಿವಿಳಾಸಗಳಾದ ಮೇಲೆ, ಆ ಕುಣಿತದೊಡನೆ ಭಾವ-ಭಂಗಿಗಳ ಪ್ರದರ್ಶನವೂ ನಡೆಯಿತು. ಜನರು ಮೈಕೈ ಅಲುಗಿಸದೆ, ಚಿತ್ರದಲ್ಲಿಯ ಗೊಂಬೆಗಳಂತೆ ಕುಳಿತು ನೋಡುತ್ತಿದ್ದರು. ಪ್ರಣಯಿಗಳ ಪ್ರಥಮಸಂದರ್ಶನದ ಭಾವಾಭಿನಯ ವಂತೂ ಅಪ್ರತಿಮವಾಗಿದ್ದಿತು. ಆಶೆ-ಕಳವಳಗಳನ್ನು ಸೂಚಿಸುವ ಆ ಮುಗುಳುನಗೆ, ನೆಲೆನಿಂತ ದೃಷ್ಟಿ, ನಾಚಿಕೆಯಿಂದ ನಸುವೆ ಕೊಂಕಿದ ಮುಖ, ಒಂದಕ್ಕೊಂದು ಮಸೆಯುತ್ತಿರುವ ಅಂಗೈ, ನಿಂತಲ್ಲಿ ನಿಂತು- ಬಿಡಲೊ, ಮುಂದೆಹೋಗಿ ಮಾತನಾಡಿಸಲೊ– ಎಂಬ ಮನಸ್ಸಿನ ತೂಗಾಟದೊಡನೆ ಬಳಕುತ್ತಿರುವ ದೇಹಲತೆ, ಇವೆಲ್ಲವುಗಳೂ ಪ್ರೇಕ್ಷಕ ರನ್ನು ಬೆರಗುಗೊಳಿಸಿದುವು; ಮರುಳುಮಾಡಿದುವು. ಗಿರಿಧರನು ಎಲ್ಲ ವನ್ನೂ ಮರೆತು ಅವಂತಿಕೆಯನ್ನೇ ನೋಡುತ್ತಿದ್ದ. ಅಲ್ಲಿಯೇ ಕುಳಿತ ಪ್ರಭೆಯು ಓರೆನೋಟದಿಂದ ಒಂದುಸಲ, ಮೈಮರೆದು ಕುಳಿತ ಗಿರಿಧರ-

ನನ್ನು ನೋಡಿದಳು; ಮತ್ತೊಂದುಸಲ ಕುಣಿಯುತ್ತಿದ್ದ ಸೂಳೆಯ ಸೌಂದರ್ಯವನ್ನು ನಿಟ್ಟಿಸಿದಳು. ಮುಖವನ್ನು ತಗ್ಗಿಸಿ ಮೆಲ್ಲಗೆ ಉಸಿರೊಂದನ್ನು ಹಾಕಿದಳು.

ಮೂಂಡರಾಗದ ಮುಕ್ತಾಯವಾಯಿತು. ಸಾರಂಗಿಯವರು 'ಬಿಹಾಗ' ರಾಗದ ಚೀಜೊಂದನ್ನು ನುಡಿಸಲುತೊಡಗಿದರು. ಮತ್ತೆ ನರ್ತನಕ್ಕೆ ಆರಂಭವಾಯಿತು. ಈ ಸಲ ವಿರಹಿಣಿಯಾದ ರಾಧೆಯ ಅಭಿನಯಕ್ಕೆ ಮೊದಲಾಯಿತು. ಭರತಶಾಸ್ತ್ರದಲ್ಲಿ ಹೇಳಿದಂತೆ ವಿರಹಿಣಿಯ ದಶಾವಸ್ಥೆಗಳನ್ನೂ ಆಕೆ ಕಣ್ಣಿಗೆ ಕಟ್ಟುವಂತೆ ನಟನೆಮಾಡಿ ತೋರಿಸಿದಳು. ಎಲ್ಲೆಲ್ಲಿಯೂ ಜನರ ಮೆಚ್ಚಿಕೆಯ ಉದ್ಗಾರಗಳೆ ! ಜನರ ಕಲಕಲವನ್ನು ಕೇಳಿ, ಪುರೋಹಿತರೂ ಒಂದೆರಡು ನಿಮಿಷ ತಮ್ಮ ಮಂತ್ರವನ್ನು ಬಿಟ್ಟು, ಅವಂತಿಕೆಯನ್ನು ನೋಡುತ್ತ ಕುಳಿತರು. ಗಿರಿಧರನಂತೂ ಕುಣಿತದಲ್ಲಿ ತಲ್ಲೀನನಾಗಿ ಬಿಟ್ಟಿದ್ದನು. ಮೊದಮೊದಲು ಪುರೋಹಿತರು ಅವನನ್ನು ಕೂಗಿ ಎಚ್ಚರಿಸಿ, ಹೇಳಬೇಕಾದ ಮಂತ್ರಗಳನ್ನು ಹೇಳಿಸುತ್ತಿದ್ದರು. ಬರುಬರುತ್ತ ಆತನ ಆಶೆಯನ್ನು ಬಿಟ್ಟು, ಎಲ್ಲವನ್ನೂ ತಾವೆ ಸಾಗಿಸ ತೊಡಗಿದರು. ನಿರ್ವಾಹವಿಲ್ಲದೆ ಬಂದಾಗ ಮಾತ್ರ ಗಿರಿಧರನನ್ನು ಎಚ್ಚರಿಸುವರು.

ನರ್ತನವು ಮುಗಿದು ಸಂಗೀತಕ್ಕೆ ಆರಂಭವಾಯಿತು. ಗಿರಿಧರನು ಕೂಗಿ ಹೇಳಿದ: "ವಸಂತರಾಗದ ಚೀಜೊಂದು ಆಗಲಿ !"

ಮದುಮಗನ ಮಾತನ್ನು ಮೀರಿ ನಡೆದರೆ ಆದೀತೇ ? ನೆರೆದ ಜನರಲ್ಲಿ ಒಬ್ಬೊಬ್ಬರು ಒಂದೊಂದು ರಾಗದ ಚೀಜನ್ನು ಹೇಳಲಿಕ್ಕೆ ಹೇಳಿ, ಕೊಂಚಕಾಲ ಗಲಾಟೆಯೇಳುವ ಸಂಭವವಿದ್ದಿತು. ಗಿರಿಧರನ ಅಪೇಕ್ಷೆಯಲ್ಲಿ ಮಿಕ್ಕವರ ಅಪೇಕ್ಷೆಗಳೆಲ್ಲವೂ ಕೊಚ್ಚಿಕೊಂಡು ಹೋದುವು ; ಆದರೆ ಗಲಾಟೆಯಾಗಲಿರುವುದು ನಿಂತಂತಾಯಿತು.

ಅವಂತಿಕೆಯು ದೊಡ್ಡದೊಂದು ತಂಬೂರಿಯನ್ನಿಟ್ಟುಕೊಂಡು ಕುಳಿತು, ಬೆರಳಿನಿಂದ ಮಿಡಿಯುತ್ತ, ವಸಂತರಾಗದ ಆಲಾಪನೆಗೆ ಮೊದಲು ಮಾಡಿದಳು. ಸಾರಂಗಿಯವರು ಸುಮ್ಮನೆ ಕುಳಿತುಕೊಂಡಿದ್ದರು. ವಸಂತ ರಾಗವು ಗಿರಿಧರನ ಕಿವಿ-ಮನಗಳನ್ನು ತುಂಬಿ, ಮೈಮರೆಯಿಸಿ

ಬಿಟ್ಟಿತು. ತಾನು ಲಗ್ನಮಂಟಪದಲ್ಲಿ ಪ್ರಭೆಯೊಡನೆ ಹಸೆಯಮೇಲೆ ಕುಳಿತುದರ ಮರವೆಯಾಗಿ, ಹಿಂದೊಮ್ಮೆ ತಾನು ಉಷೆಯ ವಸಂತ ರಾಗಾಲಾಪನೆಯನ್ನು ಕೇಳುತ್ತ ಕುಳಿತ ಚಿತ್ರವು, ಆತನ ಮನದ ಕಣ್ಣೆದುರಿನಲ್ಲಿ ಬಂದುನಿಂತಿತು. ವಿವಾಹಹೋಮದ ಆಹುತಿಯನ್ನು ಹಾಕಲಿಕ್ಕೆಂದು ಪುರೋಹಿತರು ಕೂಗದಿದ್ದರೆ, ಗಿರಿಧರನು ಆ ಚಿತ್ರವನ್ನು ಕಾಣುತ್ತ ಅದೆಷ್ಟು ಹೊತ್ತು ಕುಳಿತುಬಿಡುತ್ತಿದ್ದನೊ ಏನೊ ! ವಸಂತ-ರಾಗದ ಗೀತವೊಂದಾದ ಮೇಲೆ, ದೊಡ್ಡ ಮನುಷ್ಯರೊಬ್ಬರ ಅಪೇಕ್ಷೆಯಂತೆ ಅವಂತಿಕೆಯು 'ಗಝಲ್' ಒಂದನ್ನು ಹಾಡಿದಳು. ಹೊತ್ತಾದುದರಿಂದ ಈಗ ಸಾಕೆಂದು ಸಂಗೀತವನ್ನು ನಿಲ್ಲಿಸಲಾಯಿತು. ಮದುವೆಗೆ ಬಂದವರಿಗೆಲ್ಲ ತಾಂಬೂಲ-ಪುಷ್ಪಗಳನ್ನು ಕೊಡುವುದು ನಡೆಯಿತು. ಗಿರಿಧರನು ಸಂಗೀತವನ್ನು ನಿಲ್ಲಿಸಿ ಕುಳಿತ ಅವಂತಿಕೆಯನ್ನು ರೆಪ್ಪೆಯನ್ನು ಅಲುಗಿಸದೆ ನೋಡಿಯೇ ನೋಡುತ್ತಿದ್ದ.

---

## ೨೪ನೆಯ ಪರಿಚ್ಛೇದ

ಸಂಜೆಯ ಸೂರ್ಯನ ಹೊಂಬಿಸಿಲು ತುಂಗಭದ್ರೆಯ ತಡಿಯ ಗಿಡ-ಮರಗಳ ಮೇಲೆ ಚಿನ್ನದ ಹುಡಿಯನ್ನು ಚೆಲ್ಲಿದೆ. ಮುಳುಗಲಿರುವ ಸೂರ್ಯನ ಕಿರಣಗಳು— ಎಡಬಲದ ಜ್ಯೋತ್ಸ್ನಮಾಸದ ಮುಂಗಾರು-ಮೋಡದ ಕಿರುಬೆಟ್ಟಗಳಿಗೆ– ಚಿತ್ರವಿಚಿತ್ರವಾದ ಬಣ್ಣಗಳನ್ನು ಬರೆಯುತ್ತಲಿವೆ. ಚಿಕ್ಕ ಮೋಡದ ಮರಿಯೊಂದು ಕೆನ್ನೇಸರನ್ನು ಮುಚ್ಚಿ ಮರೆ-ಮಾಡಬೇಕೇದು ಈರ್ಷೆಯಿಂದ ಮುಂದುವರಿದುದು, ಅದೇತಕ್ಕೋ ಓರೆಯಾಗಿ ಹೋಗಿಬಿಟ್ಟಿತು. ಲೋಕದ ಚೆಲುವನ್ನು ತಾನೇತಕ್ಕೆ ಕಳೆಯಬೇಕೆಂಬ ಉದಾರಭಾವನೆಯು ಅದಕ್ಕೆ ಅಷ್ಟರಲ್ಲಿಯೇ ಉಂಟಾಯಿತೆಂದು ತೋರುವುದು. ಬಹುಶಃ ಅದಕ್ಕೆ, ತಾನು ಯಕ್ಷನಿಗೆ ನೆರವಾಗಿ ಆತನ ದುಃಖವನ್ನು ಬಿಡಿಸಿದವನ ಕುಲದಲ್ಲಿ ಹುಟ್ಟಿದವನೆಂದು ಸಾತ್ತ್ವಿಕ ಅಹಂಕಾರವೂ ಉಂಟಾಗಿರಬಹುದೆಂಬುದು ಅದರ ಗಂಭೀರವಾದ

ನಡಿಗೆಯಿಂದ ವ್ಯಕ್ತವಾಗುತ್ತಿದ್ದಿತು. ನೈರುತ್ಯದಿಶೆಯಿಂದ ಮೇಲಕ್ಕೆ ಏರಿ ಬರುತ್ತಿರುವ ಕಪ್ಪುಮೋಡವು—ಎಂತಹ ಕುರೂಪಿಯಾದರೂ ಸಂಸ್ಕಾರದ ಬೆಳಕಿನಿಂದ ಚೆಲುವನ್ನು ಪಡೆಯುವಂತೆ—ಸೂರ್ಯನ ಹೊಂಬೆಳಕನ್ನು ಹೊಂದಿ, ನೋಡಿದವರ ಕಣ್ಣು-ಮನಗಳನ್ನು ಸೆಳೆಯುತ್ತ ಲಿರುವುದು. ತುಂಗಭದ್ರೆಯ ಪ್ರವಾಹದ ಸಂಗೀತಕ್ಕೆ ಹೊಸ ಹುರುಪು ಬಂದಂತಾಗಿದೆ. ಸಮೀಪದಲ್ಲಿಯೇ ನುಡಿಸುತ್ತಿದ್ದ ತುರುಗಾಹಿಗಳ ಕೊಳಲ ನಾದವು, ತುಂಗಭದ್ರೆಯ ಗೀತದೊಂದಿಗೆ ಸವಿಯಾಗಿ ಬೆರೆತು-ಹೋಗಿದೆ. ದೀನಸೇವಕ ಸಂಘದ ಕುಟೀರದಲ್ಲಿ ಹಾಡುತ್ತಿರುವ ಸಂಧ್ಯಾ-ಗೀತಗಳು ಹೃದಯವನ್ನು ಹಿಗ್ಗಿಸುತ್ತಲಿವೆ.

ನದಿಯ ತೀರದ ಹಾಸುಗಲ್ಲೊಂದರ ಮೇಲೆ, ಸಂಘದ ಕೆಲಸಗಾರನೊಬ್ಬನು ಕುಳಿತಿದ್ದಾನೆ. ವಯಸ್ಸು ಇಪ್ಪತ್ತುನಾಲ್ಕೊ ಇಪ್ಪತ್ತೈದೊ ಇರಬಹುದು. ಮೈಮೇಲೆ ಕಾವಿಯ ಬಟ್ಟೆಯ ಷರ್ಟೊಂದಿದೆ. ಕಚ್ಚೆ ಹಾಕದೆ ದಟ್ಟಿಪಂಚೆಯನ್ನು ಸುತ್ತಿಕೊಂಡಂತಿದೆ. ತಲೆತುಂಬ ಗೇಣುದ್ದದ ಕೂದಲುಗಳು; ಕಳೆಯುಳ್ಳ ಕಣ್ಣುಗಳು. ಸಂಕುಚಿತವಾದ ಹುಬ್ಬುಗಳು ಚಿಂತಾಭಾವವನ್ನು ಹೊರಕ್ಕೆ ಹಾಕುತ್ತಿದ್ದುವು. ಆ ತರುಣನು ಒಂದುಸಲ ಪಶ್ಚಿಮಾಕಾಶದ ಶೋಭೆಯನ್ನು ನೋಡುವನು. ಇನ್ನೊಂದು ಸಲ ತುಂಗಭದ್ರೆಯ ತೆರೆಗಳ ಕುಣಿತದ ಮೇಲೆ ಕಣ್ಣನೋಟವನ್ನು ಹಾಕುವನು. ಮತ್ತೊಂದು ಸಲ ತೀರದ ಬನಸಿರಿಯನ್ನು ನೋಡುವನು. ನಡುನಡುವೆ, ಶೂನ್ಯದೃಷ್ಟಿಯಿಂದ ಯೋಚಿಸುತ್ತ ಕುಳಿತು ನಿಟ್ಟುಸಿರನ್ನು ಇಡುವನು. ತುಂಗಭದ್ರೆಯ ತರಂಗಗಳಂತೆಯೆ ಆತನ ಹೃದಯವೂ ಅಸ್ಥಿರವಾಗಿದ್ದಂತೆ ತೋರುತ್ತಿದ್ದಿತು; ಆದರೆ ತುಂಗಭದ್ರೆಯ ಅಸ್ಥಿರತೆಯಲ್ಲಿ ಉತ್ಸಾಹವನ್ನು ಕಂಡರೆ, ಈತನ ಹೃದಯದ ಅಸ್ಥಿರತೆಯಲ್ಲಿ ಉದ್ವಿ-ಗ್ನತೆಯನ್ನು ಕಾಣಬಹುದಾಗಿದ್ದಿತು. ತುಂಗಭದ್ರೆಯ ತರಂಗಿಣಿಯು ಸ್ಪಷ್ಟವಾದ ಸೌಂದರ್ಯಗೀತವನ್ನು ಹಾಡುತ್ತಿದ್ದರೆ, ಈ ತರುಣನ ಭಾವನಾತರಂಗಿಣಿಯು ಮೌನಮಯವಾದ ವಿಷಾದಗೀತವನ್ನು ಹಾಡುತ್ತಿದ್ದಿತು. ಬರುಬರುತ್ತ ಆ ಮೌನಗೀತವು ಶಬ್ದಗಳನ್ನು ಪಡೆದು ಕೊಂಡು ಆತನ ಬಾಯಿಂದ ಹೀಗೆ ಹೊರಬಿದ್ದಿತು :

ರಾಗ— ಯಮುನಾ ಕಲ್ಯಾಣಿ

" ಎಲ್ಲಿದೆಲ್ಲಿದೆ ತಣಿವು ? ಏತರಲ್ಲಿದೆ ತಣಿವು ?
ಎಲ್ಲೆಲ್ಲಿಯೂ ಕಾಣಲೊಲ್ಲದಾ ತಣಿವು !

ಕುಸುರು-ಕುಸುರಿನ ಚಿನ್ನರನ್ನದೊಡವೆಯನಿಟ್ಟು,
ಹೊಸಬಿರುಗಿನಾ ಸೀರೆ ಬಣ್ಣ ಗುಪ್ಪಸ ತೊಟ್ಟು,
ಸಾಕುಸಾಕಿನ್ನೆಂಬ ತಣಿವ ಪಡೆಯುವರು;
ಆ ಕೆಳದಿಯರು ನಕ್ಕು ನಲಿದಾಡುತಿಹರು !

ಇದು ಏನು ನನ್ನ ಈ ಎದೆಯಾಟವಚ್ಚರಿಯು !
ಒಡವೆಯುಡಿಗೆಯನೊಲಿದು ಪಡೆಯುವೆನು ; ಆದರೆಯು
ಒಡವೆ ಬಗೆದುಗುಡವನು ದೂಡಲಿಲ್ಲ,
ಉಡುಗೆ ತಣಿವನು ನಸುವು ನೀಡಲಿಲ್ಲ !

ಸರಿವರಯದವರೆಲ್ಲ ತೆರತೆರದ—ಹುರುಳಿರುವ
ಅರಳುಗಳ ಮುಡಿಮುಡಿದು ಹರುಷದಲಿ ಹಿಗ್ಗುವರು.
ಹಾರಯಿಸಿ ಹಾರಯಿಸಿ ಹೂಮುಡಿಯೆ ನಾನು
ತೀರಲಿಲ್ಲವತೃಪ್ತಿ, ಹೇರಿತದು ಇನ್ನೂ.

ಕೊಳಲೂದಿ, ವೀಣೆ-ತಂಬೂರಿಗಳ ಬಾಜಿಸುತೆ,
ಕೆಳದಿಯರು ಸುಲಭದಲಿ ತಳೆಯುವರು ತೃಪ್ತಿಯನು.
ಕೊಳಲುಲಿಯು ಬಗೆದುಗುಡ ದೂಡಲಿಲ್ಲ ;
ವೀಣೆ ತಣಿವನು ನಸುವು ನೀಡಲಿಲ್ಲ !

ಅನುಕೂಲದೈವರಾ ವನಿತೆಯರು ; ನಾ ದೈವ-
ದನುನಯವ ಕಳೆದುಕೊಂಡವಳು ! ದಿಟವೇ ದೇವ..?
ಅಲ್ಲವಿಂತಿದು ! ಅವರದದೆ ಸುಖದ ಕೊನೆಯು !
ಎಲ್ಲಿದೆಯೊ ದೂರ ನನ್ನಾ ಸುಖದ ಮನೆಯು !

ಆ ಸುಖದ ಮನೆಯ ತಲ್ಪಿಸುವ ಒಡವೆಯ ಬಯಸಿ,
ಆಸೆ-ಸೊನ್ನರತಿ ಬಗೆಯೊಳಗೆ ಬೆಂಕೆಯನಿರಿಸಿ,

**ಊದಿ ಉರಿಮಾಡಿ ಏನನೊ ಕಾಸುತಿಹಳು;**
**ಏತರಿಂದಲೊ ಯಾವುದನೊ ಬಡಿಯುತಿಹಳು ! "**

* * *

**" ಮನವ ಮನೆಮಾಡಿರುವ ದುಗುಡವನು ಕೊಂದು**
**ತಣಿವನೀಯುವ ಒಡವೆ ದೊರೆವುದೆನಗೆಂದು ? "**

" ತಮಾಷೆ ! ಕವಿಯು ನನ್ನ ಭಾವನೆಗಳನ್ನೆಲ್ಲ ಕನ್ನಡಿಸಿ, ಒಬ್ಬ ನಾಯಿಕೆಯ ಬಾಯಿಂದ ಹೊರಡಿಸಿ ತೋರಿಸಿದ್ದಾನಿಲ್ಲಿ ! " ಎಂಬ ಉದ್ಗಾರವು ತರುಣನ ಬಾಯಿಂದ ಹೊರಟಿತು. ಬೆಚ್ಚಿಬಿದ್ದವನಾಗಿ–ತನ್ನ ಮಾತನ್ನು ಯಾರಾದರೂ ಕೇಳಿದರೇನೊ—ಎಂಬ ಗಾಬರಿಯಿಂದ, ಕಣ್ಣಾರಳಿಸಿ ಸುತ್ತಲೂ ನೋಡಿದನು. ದೂರದಲ್ಲಿ—ತನ್ನ ಕಡೆಗೇ ನಡೆದು ಬರುತ್ತಿರುವ—ಜಗದಾನಂದಸ್ವಾಮಿಗಳು ಕಣ್ಣಿಗೆ ಕಂಡರು. ತರುಣನು ಮನದ ದುಗುಡವನ್ನು ದೂಡಿಹಾಕಿ, ನಮ್ರತೆಯನ್ನು ಸೂಚಿಸುವ ನಗೆಯೊಂದಿಗೆ ಕುಳಿತಲ್ಲಿಯೇ ಎದ್ದುನಿಂತನು. ಗುರುಗಳು ಅಲ್ಲಿಗೆ ಬಂದು ತಾವೂ ಕುಳಿತುಕೊಂಡರು; ಶಿಷ್ಯನಿಗೂ ಕುಳಿತುಕೊಳ್ಳಲಿಕ್ಕೆ ಹೇಳಿದರು. ತರುಣನು ಕುಳಿತುಕೊಂಡೊಡನೆಯೆ ಜಗದಾನಂದರು, ವಾತ್ಸಲ್ಯ-ವಿಶ್ವಾಸಗಳು ಬೆರೆತ ಧ್ವನಿಯಲ್ಲಿ ಮಾತನಾಡಿದರು :

" ದೀನಾನಂದ ! ನಿನ್ನಿಂದ ಗುಣಹೊಂದಿದ ಆ ರೋಗಿಯು ಔಷಧ ಕ್ಕಾಗಿ ಎಲ್ಲೆಲ್ಲಿಯೂ ಸುತ್ತಾಡಿ, ನಿರಾಶನಾಗಿ ಇಲ್ಲಿಗೆ ಬಂದಿದ್ದ. ಇತ್ತಣ ಭಾಗದಲ್ಲಿ ಆತನ ಸಿರಿವಂತಿಕೆಯನ್ನು ಕೇಳಿ ತಿಳಿಯದ ಜನರಿಲ್ಲ. ಅಂತೂ ನೀನು ಅಂತಹ ದುರ್ಘಟರೋಗದೊಂದಿಗೆ ಗುದ್ದಾಡಿ, ಗುಣಪಡಿಸಿ, ನಮ್ಮ ಸಂಘದ ಕೀರ್ತಿಯನ್ನು ಹೆಚ್ಚಿಸಿದೆ ! "

" ಏನೋ ನನಗೆ ಯಶಸ್ಸು ಸಿಕ್ಕುವ ಯೋಗವಿದ್ದಿತೆನ್ನಬೇಕು. ಆದರಿಂದ ಸಂಘದ ಕಾರ್ಯಕ್ಕೆ ವಿಶೇಷವಾದ ನೆರವು ದೊರೆತರೆ, ನನಗೆ ತುಂಬ ಸಂತೋಷ ! "

" ಆ ಗೃಹಸ್ಥ ನನ್ನೆದುರಿಗೆ ಹೇಳಿದ : ತಮ್ಮ ಹಳ್ಳಿಯಲ್ಲಿ ನಾವು ಸ್ಥಾಪಿಸಿದ್ದ ಆದಿಕರ್ಣಾಟಕ ಬಾಲಕರ ಪಾಠಶಾಲೆಯ ವೆಚ್ಚವನ್ನೆಲ್ಲ ಕೊನೆಯವರೆಗೆ ತಾನೇ ನಿರ್ವಹಿಸುತ್ತೇನೆಂದು. "

" ಸಂತೋಷದ ಸಂಗತಿ ; ಆದರದೊಂದು ಚಿಂತೆ ಬಿಟ್ಟಂತಾಯಿತು ನಮಗೆ ! "

" ನಿನ್ನೊಡನೆ ಒಂದು ವಿಷಯ ಕುರಿತು ಮಾತನಾಡಬೇಕಾಗಿದೆ ದೀನಾನಂದ ! "

ವಿನಯಪೂರಿತ ಆತುರವನ್ನು ಪ್ರಕಟಿಸುತ್ತ ತರುಣನು ಕೇಳಿದ:

" ಅದಾವ ವಿಷಯ ? ಈಗ ಮಾತನಾಡಬಹುದಲ್ಲವೇ ? "

" ನಮ್ಮ ಸಂಘದ ಶಾಖೆಯೊಂದನ್ನು ಉತ್ತರಕರ್ಣಾಟಕದಲ್ಲಿ ತೆರೆಯಬೇಕಾಗಿದೆ. ಅಲ್ಲಿಯ ಧುರೀಣರಿಂದ ಆಗಾಗ ಇದರ ಸಲುವಾಗಿ ಸೂಚನೆಗಳು ಬಂದೇ ಬರುತ್ತಲಿವೆ. ಯೋಗ್ಯರಾದ ಸಂಚಾಲಕರಾರೂ ದೊರೆಯದುದರಿಂದ, ಇದುವರೆಗೆ ಯಾವ ವಿಚಾರವನ್ನೂ ಮಾಡಿರಲಿಲ್ಲ."

" ಈಗ ಯಾವನಾದರೂ ದೊರೆತಿದ್ದಾನೆಯೆ ? "

" ಅಹುದು ದೊರೆತಿದ್ದಾನೆ! " ಮೆಲುನಗೆ ನಗುತ್ತ ಸ್ವಾಮಿಗಳು ನುಡಿದರು.

" ಸಂತೋಷದ ಸಂಗತಿ! ಅವರು ಯಾರೆಂದು ನಾನು ಕೇಳಬಹುದೇ ? "

" ಬೇರೆಯವರಾರೂ ಅಲ್ಲ ; ನೀನೇ! "

ಸಾತ್ತ್ವಿಕಾಹಂಕಾರ ಸಂತೋಷಗಳಿಂದ ಉಬ್ಬಿದೆದೆಯವನಾಗಿ ತರುಣನು ನುಡಿದ :

" ಎಲ್ಲವೂ ತಮ್ಮ ವಿಶ್ವಾಸ! ಹೇಳಿದುದನ್ನು ಮಾಡುವುದಷ್ಟು ಮಾತ್ರ ನನ್ನ ಕೆಲಸ! "

" ದೀನಾನಂದ, ನೀನು ಬರಿ ಹೇಳಿದುದನ್ನು ಮಾತ್ರ ಮಾಡುವವನಲ್ಲ; ಹೇಳಿ ಮಾಡಿಸುವ ಯೋಗ್ಯತೆಯೂ ನಿನ್ನಲ್ಲಿದೆಯೆಂಬುದನ್ನು, ನಿನ್ನನ್ನು ಕಂಡ ದಿನವೆ ತಿಳಿದುಕೊಂಡೆ. "

" ತಮ್ಮ ಮಮತೆಯ ಹರಕೆ ಬೆಂಬಲವಾಗಿ ಇದ್ದಲ್ಲಿ, ನಾನು ಏನು ಮಾಡುವುದಕ್ಕೂ ಸಿದ್ಧನಿದ್ದೇನೆ ! "

" ಈಗ ಒಂದು ಮಾತು : ಕೃಷ್ಣೆಯ ತಡಿಯಲ್ಲಿರುವ ಸೀತೆಯ ಮನೆಯ ಹೆಸರನ್ನು ನೀನು ಕೇಳಿರಬಹುದು. ಅಲ್ಲಿ ಪುಣ್ಯವಂತರೊಬ್ಬರು

ನಮ್ಮ ಸಂಘದವರಿಗಾಗಿ ಸ್ಥಳವನ್ನು ಕೊಡುವುದಲ್ಲದೆ, ಕುಟೀರಗಳನ್ನು ಕಟ್ಟಿಸಿ ಕೊಡುವುದಕ್ಕೂ ಸಮ್ಮತಿಸಿದ್ದಾರೆ. ನೀನು ಇನ್ನು ಮೂರು ನಾಲ್ಕು ದಿನಗಳಲ್ಲಿಯೆ, ನಿನಗೆ ಒಪ್ಪಿಗೆಯೆನಿಸಿದ ಇಲ್ಲಿಯ ನಾಲ್ಕೈದು ಜನರನ್ನು ಕರೆದುಕೊಂಡು ಹೊರಟುಬಿಡು ! ಅಲ್ಲಿ ನಿಮಗೆ ಎಲ್ಲ ಬಗೆಯ ಅನುಕೂಲತೆಗಳು ಒದಗುವಂತೆ ನಾನು ಕಾಗದ ಬರೆದು ಏರ್ಪಾಡು-ಮಾಡುತ್ತೇನೆ. "

" ಆಗಬಹುದು; ಗುರುಗಳ ಕೃಪೆಯು ನನ್ನಿಂದ ಹೊಣೆಗಾರಿಕೆಯ ಕೆಲಸವನ್ನು ಯಶಸ್ವಿಯಾಗಿ ನೆರವೇರಿಸಲಿ ! "

ಸಂಜೆಯಡಗಿ ಮಬ್ಬು ಕವಿಯುತ್ತ ಬಂದುದರಿಂದ, ಗುರು-ಶಿಷ್ಯರಿಬ್ಬರೂ ಎದ್ದು ಕುಟೀರದ ಕಡೆಗೆ ಸಾಗಿದರು.

---

## ೨೫ನೆಯ ಪರಿಚ್ಛೇದ

ದಿನಗಳು ಹೋದಂತೆ ತಿರುಮಲರಾಯರು ತೀರ ಹಾಸಿಗೆಯನ್ನೇ ಹಿಡಿದರು. ಮೈಯಲ್ಲಿ ಯಾವಾಗಲೂ ಸಣ್ಣಗಿನ ಜ್ವರ; ಒಣಕಲು ಕೆಮ್ಮು; ದೇಹದಲ್ಲಿಯ ರಕ್ತವೆಲ್ಲವೂ ಕಡಿಮೆಯಾಗುತ್ತ ಮುಖವು ಬೆಳುಪುಬಣ್ಣಕ್ಕಿಟ್ಟಿದ್ದಿತು. ನಾಲಗೆಗೆ ರುಚಿಯೇ ಇಲ್ಲ; ಬಲವಂತದಿಂದ ಏನನ್ನಾದರೂ ಹೊಟ್ಟೆಯಲ್ಲಿ ಹಾಕಿದರೆ, ಅದು ಜೀರ್ಣವಾಗದೆ ಹೊಟ್ಟೆಯಲ್ಲಿ ವಿಪರೀತವಾಗಿ ನೋವನ್ನುಂಟುಮಾಡುವುದು. ಡಾಕ್ಟರು ಯಾವುದೋ ದೊಡ್ಡದೊಂದು ರೋಗದ ಹೆಸರನ್ನು ಹೇಳಿದರು. ಔಷಧೋಪಚಾರ ನಡೆದೇ ಇದ್ದಿತು.

ಉಷಾ ತನ್ನ ಜೀವನಸರ್ವಸ್ವವೆಲ್ಲವೂ ತಂದೆಯೆ ಎಂದು ಭಾವಿಸಿಬಿಟ್ಟಿದ್ದಳು. ಯಾವಾಗಲೂ ಆತನ ಆರಯ್ಕೆಯಲ್ಲಿ ಆಸಕ್ತಳಾಗಿರುವಳು. ತಂದೆಯ ಸಂಸಾರವನ್ನು ಸುವ್ಯವಸ್ಥಿತವಾಗಿ ಸಾಗಿಸಿ, ಆತನ ಮನಸ್ಸನ್ನು ಕೊಂಚ ಹಾಯಾಗಿರಿಸಬೇಕೆಂದು ಎಲ್ಲ ಮನೆಗೆಲಸವನ್ನೂ

ತಾನೇ ಮಾಡುವಳು. ತಂದೆಯ ಆರಯ್ಕೆಯ ಹೊರೆಯನ್ನೂ ತಾನೇ ಹೊತ್ತಿದ್ದಳು. ಅಳುತ್ತ ಕೂಗುತ್ತಿರುವ, ಚಿಕ್ಕವರಾದ ತಮ್ಮ-ತಂಗಿಯರನ್ನು ಪ್ರೀತಿಯಿಂದ ಸಂತವಿಡುವಳು; ಅವರ ಯೋಗ-ಕ್ಷೇಮವನ್ನೂ ವಿಚಾರಿಸುವಳು. ಇಷ್ಟಾದರೂ ಕಮಲಮ್ಮನವರ ಸಿಡುಕುಮಾತುಗಳನ್ನು ಕೇಳಬೇಕಾದ ಸಂದರ್ಭ ಅವಳಿಗೆ ಆಗಾಗ ಬಾರದೆ ಇರುತ್ತಿರಲಿಲ್ಲ. ಆದರೂ ತಂದೆಯ ಮನಸ್ಸನ್ನು ಸಂತೋಷದಲ್ಲಿಟ್ಟಿರಬೇಕೆಂದು, ನಿರಂತರವಾದ ಹೃದಯದ ಕೊರೆತವನ್ನು ಒತ್ತಾಯದಿಂದ ಬದಿಗಿಟ್ಟು, ಇಲ್ಲದ ಉತ್ಸಾಹವನ್ನು ಮುಖದ ಮೇಲೆ ತಂದುಕೊಂಡಿರುವಳು. ನಿನ್ನೆಯ ರಾತ್ರಿಯೆಲ್ಲವೂ ರಾಯರಿಗೆ ನಿದ್ರೆಯೇ ಬಂದಿರಲಿಲ್ಲ; ರಾತ್ರಿ-ಯುದ್ಧಕ್ಕೂ ಹೊಟ್ಟೆಯಲ್ಲಿ ಸಂಕಟ. ನಿಟ್ಟುಸಿರಿನ ಹಿಂದೆ ನಿಟ್ಟುಸಿರುಗಳು. ತಂದೆಯೊಡನೆ ಉಷೆಗೂ ಜಾಗರಣೆ.

ಬೆಳಗಿನ ಒಂಬತ್ತು ಗಂಟೆಯಾಗಿದೆ. ಔಷಧವನ್ನು ಕೊಟ್ಟಾದ ಮೇಲೆ, ತಂದೆಗೆ ನಿದ್ದೆಬರಲೆಂದು ಉಷೆಯು ತನ್ನ ಮೆಲುಗೈಗಳಿಂದ ರಾಯರ ಮೈದಡಹುತ್ತ ಬಳಿಯಲ್ಲಿ ಕುಳಿತಿದ್ದಾಳೆ. ಆಕೆಯ ತೆರೆದ ಕಣ್ಣಿನ ನೋಟವು ಯಾವ ಗುರಿಯಲ್ಲಿ ನೆಲಸಿದ್ದಿತೋ ತಿಳಿಯದು. ಏನನ್ನೋ ಯೋಚಿಸುತ್ತಿರುವ ಗುರುತು ಮುಖದ ಮೇಲೆ. ತಿರುಮಲರಾಯರು ತಮ್ಮ ಸುಕ್ಕುಗಟ್ಟಿದ ಕಣ್ಣುಗಳನ್ನರಳಿಸಿ, ಮಗಳ ಕಡೆಗೆ ನೋಡಿಯೆ ನೋಡುತ್ತಿದ್ದರು. ಅವರ ಮೈಯಲ್ಲಿದ್ದ ನಾಲ್ಕೈದು ಹನಿ ರಕ್ತವೂ ಕಂಬನಿಯಾಗಿ ಹೊರಕ್ಕೆ ಹರಿದು ಬಂದಿತು. ಕಷ್ಟದಿಂದ ಉಸಿರನ್ನು ಹಾಕಿದರು; ಬಿಗಿದ ಕಂಠದಿಂದ ಮಗಳನ್ನು ಕರೆದರು :

"ಉಷಾ !"

ಬೆಚ್ಚಿಬಿದ್ದವಳಾಗಿ ಉಷೆಯು ಕೇಳಿದಳು :

"ಏನಪ್ಪಾ ?"

ಸ್ವಲ್ಪವೆ ತಡೆದು, ಗಂಟಲನ್ನು ಸಡಿಲುಮಾಡಿಕೊಂಡು, ರಾಯರು ನುಡಿದರು :

"ಉಷಾ, ನೀನು ಸುಖಿಯಾಗಿದ್ದುದನ್ನು ನನ್ನ ಕಣ್ಣುಗಳು ಕಾಣುವುದಿಲ್ಲವೇನಮ್ಮಾ?"

ಉಷೆಯ ಕಣ್ಣು ನೀರಿನಿಂದ ತುಂಬಿಕೊಂಡುವು. ಗದ್ಗದಕಂಠದಿಂದ ನುಡಿದಳು:

"ಅಪ್ಪಾ, ನಾನು ಸುಖಪಡಲಿಕ್ಕೆಂದು ಹುಟ್ಟಿಬಂದಿದ್ದೇನೆಯೇ? ನನಗೆ ಸುಖ ದೊರೆಯಬೇಕಾಗಿದ್ದಲ್ಲಿ, ನನ್ನ ತಾಯಿಯನ್ನೇಕೆ ನಾನು ಕಳೆದುಕೊಳ್ಳುತ್ತಿದ್ದೆ? ನಿನ್ನ ಕಣ್ಣಾಹರಳಾಗಿ ಎದೆಯ ಮುಳ್ಳಾಗಿ ಏಕೆ ಹೀಗೆ ಬಾಳುತ್ತಿದ್ದೆ? ನನ್ನ ಹಣೆಯಲ್ಲಿ ಸೌಖ್ಯವನ್ನೆ ಬರೆದಿದ್ದಲ್ಲಿ, ನೀನೇತಕ್ಕೆ ಹೀಗೆ ಹಾಸಿಗೆ ಹಿಡಿದು ನರಳುತ್ತ ಮಲಗುತ್ತಿದ್ದೆ?"

ತಿರುಮಲರಾಯರು ಮಾತನಾಡದೆ ಯೋಚಿಸಲು ತೊಡಗಿದರು. ಅವರಿಗಾಗ ಉಷೆಯ ತಾಯಿಯೊಡನೆ ತಾವಿದ್ದ ಸುಖದ ದಿವಸಗಳ ಜ್ಞಾಪಕವಾಗುತ್ತಿದ್ದಿತೇನೊ! ಮುಖವು ಕೆಲವು ನಿಮಿಷ ಒಂದು ಬಗೆಯ ಸಮಾಧಾನವನ್ನು ತಳೆದಿದ್ದಿತು; ಬಳಿಕ ಉಷೆಯ ಕಡೆಗೆ ನೋಟವನ್ನು ಹೊರಳಿಸಿ, ಕಳವಳದ ಕಂಠದಿಂದ ಹೇಳಿದರು:

"ಉಷಾ, ನಿನ್ನ ತಾಯಿ ಮನುಷ್ಯಳಲ್ಲ; ಅವಳೊಬ್ಬ ದೇವತೆ. ಆಕೆಯೊಡನೆ ಬಾಳಿಕೊಂಡಿರುವುದು ಈ ಪಾತಕಿಯ ಹಣೆಯಲ್ಲಿ ಬರೆದಿರಲಿಲ್ಲ. ಉಷಾ, ನೀನಿಲ್ಲದಾಗ ನನಗೆ ಅಷ್ಟೊಂದು ವ್ಯಸನವಿರಲಿಲ್ಲ. ಈಗ ನೀನು ಬಂದಮೇಲೆ, ನಿನ್ನ ಮುಖ ನೋಡಿದಾಗೆಲ್ಲ ಆ ದೇವತೆಯ ನೆನಪು ಆಗುವುದು; ಎದೆಯಲ್ಲಿ ಕುದಿಯೇಳುವುದು. ನೀನು ನಿಜವಾಗಿಯೂ ಆ ದೇವತೆಯ ಮಗಳು; ಪಾತಕಿಯಾದ ನನ್ನ ಮಗಳಲ್ಲ ನೋಡು!" ರಾಯರ ಧ್ವನಿಯು ದುಃಖದಿಂದ ಕಂಪಿಸಿತು.

"ಅಪ್ಪಾ, ಏನಾದರೂ ಜ್ಞಾಪಿಸಿಕೊಂಡು, ಸುಮ್ಮಸುಮ್ಮನೆ ಮನಸ್ಸಿಗೆ ವ್ಯಥೆಯನ್ನುಂಟುಮಾಡಿಕೊಳ್ಳಬೇಡ. ನಾನು ದೇವತೆಯ ಹೊಟ್ಟೆಯಿಂದ ಹುಟ್ಟಿದ್ದರೂ ನಿನ್ನ ಪಾಲಿಗೆ ರಾಕ್ಷಸಿಯಾಗಿ ಬದುಕಿಕೊಂಡಿದ್ದೇನೆ!"

"ಹಾಗೆಲ್ಲಾ ಅಂದುಕೊಳ್ಳಬೇಡವಮ್ಮಾ! ಮಗು, ನಿನ್ನನ್ನು ಸುಖಿಯನ್ನಾಗಿ ಮಾಡಿ, ನಾನೂ ಸಮಾಧಾನವನ್ನು ಪಡೆಯಬೇಕೆಂದು, ಸುದರ್ಶನನನ್ನು ಎಲ್ಲೆಲ್ಲಿಯೊ ಹುಡುಕಿಸಿದೆ. ಎಲ್ಲಿಯೂ ಆತನ ಗೊತ್ತೇ ಹತ್ತಲೊಲ್ಲದು. ಜನರು ಬೇಕಾದುದನ್ನು ಆಡಿಕೊಳ್ಳಲೊಲ್ಲರೇಕೆ ಉಷಾ! ನಿನ್ನ ಮನಸ್ಸನ್ನು ಮುರಿದು, ಬೇರೆ ಯಾರಿಗೂ ನಿನ್ನನ್ನು ಕೊಡುವುದಕ್ಕೆ ನನಗೆ ಸಮ್ಮತವೆನಿಸದು."

"ಏನಾದರೂ ಆದೀತು; ಅದೆಲ್ಲವೂ ಈಗ ಏತಕ್ಕೆ ಬೇಕಾಗಿದೆ? ನಿನ್ನ ಆರೋಗ್ಯ ಸರಿಯಾದರೆ ನಿಜವಾಗಿಯೂ ನಾನು ಸುಖಿ! ನನಗೆ ಇನ್ನಾವ ಸುಖದ ಆಶೆಯೂ ಇಲ್ಲ!" ಮಾತಿನ ಕೊನೆಗೆ ಉಷೆಯದೊಂದು ನಿಡುಸುಯ್ಲು.

ರಾಯರು ಕಣ್ಣುಮುಚ್ಚಿದರು. ದುಃಖಾವೇಗದಿಂದ ಶ್ರಾಂತರಾದುದರಿಂದಲೂ, ರಾತ್ರಿಯೆಲ್ಲ ನಿದ್ರೆಯಿಲ್ಲದುದರಿಂದಲೂ ನಸುವೆ ನಾಯಿಜಂಪು ರಾಯರನ್ನು ಸೋಂಕಿದ್ದಿತು. ಉಷೆಯು ಮೈಮೇಲೆ ಕೈಯಾಡಿಸುತ್ತ ಕುಳಿತಿದ್ದಳು. ಇದ್ದುದಿದ್ದ ಹಾಗೆಯೆ ಅಲ್ಲಿಗೆ ಕಮಲಮ್ಮ ಕೂಗುತ್ತ ಬಂದರು:

"ದೊರೆಸಾನಿ ಕುಳಿತಿದ್ದಾಳಲ್ಲ! ಹನ್ನೆರಡು ತಾಸೂ ಕುಳಿತು-ಕೊಂಡಿರಲಿಕ್ಕೆ ಬೇಕು; ಅದಕ್ಕಾಗಿ ತಂದೆಯ ಮೇಲಿನ ಪ್ರೀತಿಯ ಸೋಗು! ನೀನಿಲ್ಲಿ ಕುಳಿತಿರದಿದ್ದರೆ ನಡೆಯುವಂತೆಯೆ ಇಲ್ಲವೇನು? ನೀರೊಲೆಯ ಕಡೆಗೆ ನೋಡಿದ್ದೀಯಾ? ನೀರು ಕಾಯ್ದಿದೆಯೆ ? ನ—ನ್ನ ಮಗನಿಗೆ ನೀರೆರೆಯಲಿಕ್ಕೆ ನೀ—ನೇತಕ್ಕವ್ಮಾ ನೀರು ಕಾಯಿಸಬೇಕು?"

ಉಷೆಯು ಮೆಲ್ಲಗೆ ಹೇಳಿದಳು :

"ಸ್ವಲ್ಪ ನಿಧಾನವಾಗಿ ಮಾತನಾಡಮ್ಮಾ! ಅಪ್ಪನಿಗೆ ಇದೇ ಈಗ ಸ್ವಲ್ಪ ನಿದ್ದೆ ಹತ್ತಿದಂತಾಗಿದೆ!"

ಕಮಲಮ್ಮನ ಕೂಗು ರಾಯರ ನಿದ್ದೆಯನ್ನು ನುಂಗಿ ನೀರು-ಕುಡಿದೇ ಬಿಟ್ಟಿತು. ಉಷೆಯು ಅದೆಷ್ಟು ದೈನ್ಯದಿಂದ ಬಿನ್ನವಿಸಿಕೊಂಡರೂ ಆಕೆ ಮತ್ತೆ ಕೂಗಿಕೊಂಡಳು :

" ನಾವು ಹಳ್ಳಿಯ ಹುಂಬ ಜನ; ನಮಗೆ ನಿಧಾನವಾಗಿ ಮಾತ ನಾಡಲಿಕ್ಕೆ ಹೇಗೆ ಬಂದೀತು ? ನೀವು ಸೂಕ್ಷ್ಮಜನ; ಕಲಿತವರು! ಎಲ್ಲಾ ರೀತಿ-ನಡತೆ ನಿಮಗೆ ಗೊತ್ತು! ಇಪ್ಪತ್ತು ವರ್ಷದವಳಾದರೂ ಮದುವೆ ಕಾಣದೆ ಕುಳಿತ ಗುಣವಂತಿ ನೀನು ! ನನಗೆ ರೀತಿಯನ್ನು ಕಲಿಸಲಿಕ್ಕೆ ಬರುತ್ತೀಯಾ ? "

ಉಷೆಯು ಇನ್ನಿಷ್ಟು ದೈನ್ಯದಿಂದ ನುಡಿದಳು :

" ಅಮ್ಮಾ, ನಾನೀಗ ನಿನಗೆ ರೀತಿಯನ್ನು ಕಲಿಸಿದಂತಾಯಿತೇ ? ಅಪ್ಪನಿಗೆ ರಾತ್ರಿಯೆಲ್ಲವೂ ನಿದ್ದೆಯಿಲ್ಲ; ಇದೀಗಲೇ ಏನೋ ಸ್ವಲ್ಪ ಕಣ್ಣು ಮುಚ್ಚಿದ್ದರು. ಅದಕ್ಕಾಗಿಯೆ ಮೆಲ್ಲಗೆ ಮಾತನಾಡೆಂದು ಹೇಳಿದೆ ನಮ್ಮಾ ! "

" ಹೌದಮ್ಮಾ, ನೀನೊಬ್ಬಾಕೆಯೇ ಹಿತವಂತಿ; ನಾವೇನು ಹತ್ತಿ ದವರೋ ಹೊಂದಿದವರೋ ? ನಮಗೆಲ್ಲಿದೆ ಅವರ ಯೋಚನೆ ? "

ರಾಯರ ಮುಖವು ಬೇಸರದಿಂದ ಮುದುರಿಕೊಂಡಿತು; ಉಷೆಯು ನುಡಿದಳು :

" ಇದೇನು ಮಾತೇ ಅಮ್ಮಾ ? "

" ನಾವೇನಮ್ಮಾ ! ಮೊದಲೇ ಹೇಳಲಿಲ್ಲವೇ ಮೂರ್ಖರೆಂದು ! ಹೇಗಾದರೂ ಮಾತನ್ನಾಡುತ್ತೇವೆ ! ನೀವು ಜಾಣರು, ಬುದ್ಧಿವಂತರು; ಎಂತಲೇ ನಿಮ್ಮ ಕೀರ್ತಿಯನ್ನು ಜಗತ್ತೆಲ್ಲಾ ಕೊಂಡಾಡುತ್ತದೆ ! ಚೆನ್ನಾಗಿ ಮಾತನಾಡುವುದು ನಿಮಗೆ ಮಾತ್ರ ಗೊತ್ತು! "

ಉಷೆಯು ಕೆಳಕ್ಕೆ ಮುಖವನ್ನು ಮಾಡಿ, ಕಂಬನಿಗರೆಯಲು ತೊಡಗಿದಳು. ರಾಯರು ಕುಗ್ಗಿದ ಕಂಠದಿಂದ ಕಮಲಮ್ಮನಿಗೆ ಒಂದೇ ಒಂದು ಮಾತನ್ನಾಡಿದರು :

" ನಿಜವಾಗಿಯೂ ನೀನು ರಕ್ಕಸಿ ನೋಡು ! "

" ಹೌದು! ನಾನು ರಕ್ಕಸಿ, ದೆವ್ವ, ಭೂತ, ಪಿಶಾಚಿ! ಎಲ್ಲರಿಂದಲೂ ಅನ್ನಿಸಿಕೊಳ್ಳುವ ಖೋಡಿ ಜನ್ಮ ನನ್ನದು! " ಎಂದು ಕೂಗುತ್ತ ಅಳುತ್ತ ರಭಸದಿಂದ ಕಮಲಮ್ಮ ನಡೆದುಬಿಟ್ಟಳು.

ಎದೆಗುದಿಯನ್ನು ಮೊಗದ ಮೇಲೆ ಮೂಡಿಸಿಕೊಂಡು ಮಲಗಿದ್ದ ತಂದೆಗೆ ಉಷೆಯು ಮೆಲ್ಲಗೆ ಹೇಳಿದಳು :

" ಇದಾವುದನ್ನೂ ನೀನು ಮನಸ್ಸಿಗೆ ಹಚ್ಚಿಕೊಳ್ಳಬೇಡಪ್ಪಾ ! "

ಉಕ್ಕಿಬರುವ ದುಃಖವನ್ನು ನುಂಗುತ್ತ ರಾಯರು ಹೇಳಿದರು :

" ತಿರುಗಿ ನೀನೇ ನನಗೆ ಹೇಳಬೇಕಾಯಿತೇನಮ್ಮಾ ! "

---

## ೨೬ನೆಯ ಪರಿಚ್ಛೇದ

ಆಷಾಢಮಾಸದ ಕೃಷ್ಣಪಕ್ಷ; ಕಾರ್ಮೋಡವು ಬಾನನ್ನು ಬಾಸಣಿಸಿ ಬಿಟ್ಟಿದೆ. ಹತ್ತುಗಂಟೆ ರಾತ್ರಿಯಾಗಿರಬಹುದು. ಮಲೆನಾಡಿನ ಮುಂಗಾರುಮಳೆಯ ಸೆಳಕುಗಳು, ಹಗಲೆನ್ನದೆ ರಾತ್ರಿಯೆನ್ನದೆ ಒಂದರ ಹಿಂದೊಂದು ಬಾದೇ ಬರುತ್ತಲಿವೆ. ಪಶ್ಚಿಮದ ಮಳೆಗಾಳಿಯು ಮನೆಯ ಕಿಟಕಿ-ಕಂಡಿಗಳಲ್ಲಿ ಭುಸ್ಸೆಂದು ನುಗ್ಗಿ, ಎಡೆಬಿಡದೆ ಚಳಿಯನ್ನು ತೂರುತ್ತಲಿದೆ. ಮಿಣುಕು-ಮಿಣುಕಾದ ಬೀದಿಯ ದೀವಿಗೆಗಳು, ಮಳೆಯ ನೀರಿನಿಂದ ಇನ್ನಷ್ಟು ಮಂಕಾಗಿವೆ. ಆ ಮಳೆ, ಆ ಗಾಳಿ, ಆ ಕಗ್ಗತ್ತಲು, ಆ ದಾರಿಯ ಕೆಸರು ಎಲ್ಲವೂ ಸೇರಿ, ಯಾರಿಗೂ ಮನೆಯ ಹೊರಕ್ಕೆ ಕಾಲಿಡಲು ಬಾರದಂತಹ ಪರಿಸ್ಥಿತಿಯನ್ನುಂಟು ಮಾಡಿವೆ.

ಗಿರಿಧರನ ಮಲಗುಮನೆಯಲ್ಲಿ, ವಿಷಣ್ಣವದನಳಾಗಿ ಪ್ರಭಾ ಕುಳಿತಿದ್ದಾಳೆ. ಆಕೆಯ ಸುವ್ಯವಸ್ಥೆಯಿಲ್ಲದ ಉಡಿಗೆ-ತೊಡಿಗೆ, ಬಳಲಿದ ಮುಡಿ, ಕಂದಿದ ಮುಖ, ಸೊರಗಿದ ದೇಹ ಇವೆಲ್ಲವುಗಳನ್ನು ನೋಡಿದರೆ 'ಇವಳು ಪ್ರಭೆಯೇ ಅಹುದೇನು ?' ಎನ್ನುವಷ್ಟು ಮಾರ್ಪಾಡನ್ನು ಹೊಂದಿಹೋಗಿದ್ದಾಳೆ. ಪ್ರಭೆಯ ಮುಖವನ್ನು ಎಂದೂ ಅಗಲದಿದ್ದ ಬಾಲಭಾವದ ಮುಗ್ಧಮೃದುಹಾಸ್ಯವು, ಆಕೆಯನ್ನು ಬಿಟ್ಟು ಬಹಳ

ದಿನಗಳಾದಂತೆ ತೋರುತ್ತಿದೆ. ನಿಟ್ಟುಸಿರಿಡುತ್ತ, ಆಕೆ ತನ್ನೊಳಗೆ ತಾನೆ ಯೋಚಿಸುತ್ತಿದ್ದಳು :

" ಸಿರಿವಂತನಾದ ಗಂಡಬೇಕೆಂದು ನಾನು ಅದೆಷ್ಟೋ ಹಂಬಲಿಸುತ್ತಿದ್ದೆನಲ್ಲವೇ ? ನಾನು ಆಗ ಹುಚ್ಚಿ; ಯಾವುದೂ ತಿಳಿಯುತ್ತಿರಲಿಲ್ಲ ! ಎಂತಲೇ ಆಯುಷ್ಯವೆಲ್ಲವೂ ಕಣ್ಣೀರಿನೊಡನೆ ಕಾಲಕಳೆಯುವಂತಹ ಸಂದರ್ಭವನ್ನು ತಂದುಕೊಂಡೆ ! ನಾನು ಬಡವನೊಬ್ಬನನ್ನು ಮದುವೆ ಮಾಡಿಕೊಂಡಿದ್ದರೆ ಸುಖಿಯಾಗಿರಬಹುದಾಗಿದ್ದಿತಲ್ಲವೇ ? ಅಯ್ಯೋ ! ಇವರೊಡನೆಯೆ ಚಿಕ್ಕತನದಿಂದಲೂ ಬೆಳೆದ ಸುದರ್ಶನನನ್ನು, ಬಡವನೆಂದು ನಾನೆಷ್ಟೋ ಕಡೆಗಣ್ಣಿನಿಂದ ಕಾಣುತ್ತಿದ್ದೆ. ದೇವಾ, ಆತನ ಗುಣವು ಇವರಿಗೆ ಬಂದು, ಇವರ ಸಿರಿತನವೆಲ್ಲ ಆತನಿಗೆ ಹೋದರೆ ನಾನು ಸಂತೋಷದಿಂದ ಬದುಕಿರುವೆನು. ಪ್ರಭೇ, ಹುಚ್ಚೀ, ನೀನು ಜಹಗೀರ್‌ದಾರನ ಹೆಂಡತಿಯಾಗಬೇಕೆಂದು ಹಂಬಲಿಸಿದೆಯಲ್ಲವೇ ? ಮೋಟಾರಿನಲ್ಲಿ ಕುಳಿತು ಮೆರೆಯಬೇಕೆಂದು ಅಪೇಕ್ಷಿಸಿದೆಯಲ್ಲವೇ ! ಉಣ್ಣು ಹಾಗಾದರೆ. . ಈ ಜಹಗೀರ್‌ದಾರನ ಹೆಂಡತಿಯ ಸುಖವನ್ನು ! "

ಗಿರಿಧರನು ಒಳಕ್ಕೆ ಬಂದ. ಪ್ರಭೆಯ ಮುಖದಲ್ಲಿ ಎಂದೂ ತೋರದಷ್ಟು ಆಶೆ-ದೈನ್ಯಗಳು ತೋರಿದುವು. ಅಹಂಭಾವದ ಪ್ರತಿಮೆಯಾಗಿದ್ದ ಅಂದಿನ ಪ್ರಭೆಯು, ಇಂದು ನಮ್ರತೆಯ ಮೂರ್ತಿಗೊಂಡಂತೆ ಇದ್ದು, ಒಮ್ಮೆಲೆ ಸಾವರಿಸಿಕೊಳ್ಳುತ್ತ ಎದ್ದುನಿಂತಳು. ಗಿರಿಧರನ ಮೈಮೇಲೆ ಹೊರಕ್ಕೆ ಹೊರಡುವಾಗಿನ ಉಡಿಗೆ-ತೊಡಿಗೆಗಳಿದ್ದುವು. ಮಳೆಯನ್ನು ನಿವಾರಿಸುವ ಮೇಲಂಗಿಯೂ ಹೆಗಲ ಮೇಲೆ ಇದ್ದಿತು. ಬಂದವನೆ ತನ್ನ ಪೆಟ್ಟಿಗೆಯನ್ನು ತೆರೆದ; ಒಳಗಿನದೇನನ್ನೋ ತೆಗೆದುಕೊಂಡು ಜೇಬಿಗೆ ಸೇರಿಸಿದ. ಹಾಗೆಯೇ ಪೆಟ್ಟಿಗೆಗೆ ಬೀಗ ಹಾಕಿ ಎದ್ದು ಹೊರಕ್ಕೆ ಹೊರಟ. ಬಾಗಿಲಲ್ಲಿ ಪ್ರಭೆಯು ನಿಂತಿದ್ದಳು ; ವಿನಯದಿಂದ ಕೇಳಿದಳು.

" ಇಂದೂ ಹೋಗಲೆ ಬೇಕೇನು ? "

" ಹುಂ ! "

"ಎಂಟು ಹತ್ತುದಿನಗಳಿಂದ ಮನೆಯಲ್ಲಿ ಮಲಗಿಕೊಂಡೇ ಇಲ್ಲ. ಮಳೆಯೂ ವಿಪರೀತವಾಗಿದೆ. ದಾರಿಯಲ್ಲೆಲ್ಲ ಕೆಸರು. ಸೈಕಲ್ಲು ಕೂಡ ನಡೆಯಲಾರದು!"

"ಕೆಲಸವಿದೆ, ನಾನು ಹೋಗಲೇಬೇಕು!"

ಅಭಿಮಾನಿನಿಯಾದ ಪ್ರಭೆಗೆ ಇದಿಷ್ಟು ಸಾಕಾಯಿತು. ಬೇಸರು-ಮುಳಿಸುಗಳ ಬೆರಕೆಯ ಸ್ವರದಲ್ಲಿ ಆಕೆ ಮಾತನಾಡಿದಳು:

"ಕೆಲಸವೆಲ್ಲವೂ ಗೊತ್ತಿದೆ. ನನ್ನನ್ನು ಮದುವೆಯಾದರೂ ಏತಕ್ಕೆ ಮಾಡಿಕೊಳ್ಳಬೇಕಾಗಿತ್ತು?"

ಗಿರಿಧರನು ಸಿಡಿನುಡಿಗಳಲ್ಲಿ ಹೇಳಿದ:

"ನಾನೇನೂ ಮಾಡಿಕೊಳ್ಳಲಿಲ್ಲ; ನಿನ್ನ ತಾಯಿಯ ಹಟ ನಮ್ಮ ತಂದೆಯವರಿಂದ ಮಾಡಿಸಲು ಹಚ್ಚಿತು!"

"ಯಾರದೇ ಹಟವಿರಲಿ, ಯಾರಿಂದಲೆ ಮಾಡಿಸಲಿ! ನಾನು ನಿಮ್ಮ ಮದುವೆಮಾಡಿಕೊಂಡ ಹೆಂಡತಿಯಲ್ಲವೆ? ಮದುವೆ ಮಾಡಿಕೊಂಡ ಹೆಂಡತಿಯನ್ನು ಹೀಗೆ ಹೀಗಳೆದು ಹೊರಡುವುದು ಗಂಡನ ಕರ್ತವ್ಯ-ಬುದ್ಧಿಗೆ ಸರಿಯೆನಿಸುವುದೇ?"

"ನನ್ನ ಕರ್ತವ್ಯಾಕರ್ತವ್ಯಗಳು ನನಗೆ ತಿಳಿಯುತ್ತವೆ. ಅದನ್ನು ತಿಳುಹಿಸಲಿಕ್ಕೆ ನೀನೇನು ಬೇಕಾಗಿಲ್ಲ!" ಎಂದು ನುಡಿಯುತ್ತಲೇ, ಬಾಗಿಲಿಗೆ ನಿಂತ ಪ್ರಭೆಯನ್ನು ಒತ್ತಾಯದಿಂದ ನೂಕಿ ಹೊರಟುಬಿಟ್ಟನು. ಪ್ರಭೆಯ ತಲೆಯು ಬಾಗಿಲ ತೋಳಿಗೆ ಬಲವಾಗಿ ಬಡಿಯಿತು; ಒಡೆದು ನೆತ್ತರು ಸುರಿಯಲು ತೊಡಗಿತು. ಅದರ ಕಡೆಗೆ ಪ್ರಭೆಯ ಲಕ್ಷ್ಯವೇ ಇಲ್ಲ. ಹುಚ್ಚು ಹಿಡಿದವಳಂತೆ ದಡದಡನೆ ನಡೆದು, ಹಾಸಿಗೆಯ ಮೇಲೆ ಬೋರಲಾಗಿ ಬಿದ್ದುಕೊಂಡಳು. ನೀರವವಾಗಿ ಕಣ್ಣೀರನ್ನು ಸುರಿಸಲು ತೊಡಗಿದಳು. ನೆತ್ತರು ಮೇಲುಹಾಸಿಗೆಯ ಬಿಳಿಯ ಬಟ್ಟೆಯನ್ನು ಮುಳುಗಿಸಿಬಿಟ್ಟರೂ ಪ್ರಭೆಗೆ ಅದರ ಅರಿವೆ ಇಲ್ಲ. ಬರುಬರುತ್ತ ಒಡಲನ್ನು ತುಂಬಿದ್ದ ಅಳುವು, ಬಿಕ್ಕುಗಳ ರೂಪದಿಂದ ಹೊರಕ್ಕೆ ಬರಲು ಮೊದಲಾಯಿತು.

ಕೆಳಮನೆಯಲ್ಲಿ ಮಾತನಾಡುತ್ತ ಕುಳಿತ ಅಪ್ಪಣರಾಯರಿಗೂ ಯಶೋದಮ್ಮನಿಗೂ ಇದೆಲ್ಲವೂ ಹೇಗೆ ಗೊತ್ತಾಗಬೇಕು? ಹನ್ನೆರಡು ಹೊಡೆದು ಹೋದರೂ ಗಂಡ-ಹೆಂಡತಿಯರ ಮಾತು ನಡೆದೇ ಇದ್ದಿತು. ಯಶೋದಮ್ಮನ ಕಣ್ಣುಗಳಲ್ಲಿ ಆಗಾಗ ಅಳುವಿನ ಪ್ರತಿನಿಧಿಗಳು ಅವತರಿಸುತ್ತಿದ್ದುವು. ರಾಯರ ಮುಖವು ಮಾತ್ರ ಬಾಡಿದ ಬದನೆಯಕಾಯಂತೆ ಆಗಿದ್ದಿತು. ಎಷ್ಟೋ ಮಾತು-ಕತೆಗಳಾದ ಮೇಲೆ, ನಿಟ್ಟುಸಿರಿನೊಡನೆ ರಾಯರು ಹೇಳಿದರು :

"ಭೈರವನು ಅದೇತಕ್ಕೋ ನಮ್ಮ ಮೇಲೆ ಮುನಿದಂತೆ ಕಾಣುತ್ತಲಿದೆ. ಮೂರು ನಾಲ್ಕು ತಿಂಗಳುಗಳಾದುವು, ನಮ್ಮ ಮನೆಯಲ್ಲಿ ನೆಲೆಮಾಡಿದ್ದ ಅಸಮಾಧಾನವು ತನ್ನ ಕಾಲನ್ನೇ ಕಿತ್ತಲೊಲ್ಲದಾಗಿದೆ. ಮದುವೆಯಾದ ಮೇಲೆ ಎಲ್ಲವೂ ಸರಿಹೋದೀತೆಂದು ನನ್ನ ಭಾವನೆಯಿದ್ದಿತು. ಆದರೇನು! ಆದುದೆಲ್ಲವೂ ವಿಪರೀತವಾಗಿಯೆ ಪರಿಣಮಿಸಿಬಿಟ್ಟಿತು. ಇನ್ನು ಏನು ಮಾಡಬೇಕೆಂಬುದೇ ನನಗೆ ತಿಳಿಯಲೊಲ್ಲದಾಗಿದೆ. ಭೈರವಾ! ನಿನ್ನ ಸನ್ನಿಧಿಯನ್ನು ಬಿಟ್ಟು ಬಂದಿದ್ದೇವೆಂದು ನಮ್ಮ ಮೇಲೆ ಇಷ್ಟೊಂದು ಕೋಪವೇನಪ್ಪಾ! ಇದೊಂದು ಸಲ ಈ ನಿನ್ನ ಸೇವಕನನ್ನು ಕ್ಷಮಿಸಿಬಿಡಬಾರದೇ?"

---

## ೨೭ನೆಯ ಪರಿಚ್ಛೇದ

ಪಟ್ಟಣದಲ್ಲಿಯ ಮನೆಯದೊಂದು ಉಪ್ಪರಿಗೆ; ಉಪ್ಪರಿಗೆಯು ಚಿಕ್ಕದಾದರೂ ಅಲ್ಲಿಯ ಓರಣವು ನೋಡುವಂತಿದ್ದಿತು. ಒಂದು ಪಕ್ಕದ ಗೋಡೆಗೆ ಕರಿಯಮರದ ಚಪ್ಪರದ ಮಂಚ. ಮೇಲಿನ ನಯವಾದ ಸೊಳ್ಳೆಯ ಪರದೆಯು ಮಂಚದ ಹಾಸಿಗೆಯನ್ನು ಮುಚ್ಚಿಬಿಟ್ಟುದರಿಂದ, ಅದು ಎಂತಹದಿದ್ದಿತೆಂಬುದನ್ನು ಹೇಳಲಿಕ್ಕೆ ಬಾರದು. ಅಂದವಾದ ಹೆಣಿಕೆಯ ಜಾಳಿಗೆಯು ಗೋಡೆಗಳನ್ನು ಅಲಂಕರಿಸಿದ್ದಿತು. ಆಳೆತ್ತರದ

ಮೂರು ನಿಲುಗನ್ನಡಿಗಳು ಮುಕ್ಕಡೆಯ ಗೋಡೆಗಳನ್ನು ಒರಗಿ ನಿಂತಿದ್ದುವು. ಮೇಲ್ಗೋಡೆಯಲ್ಲಿ ಸಾಲಾಗಿ ಕೂರಿಸಿದ್ದ ಶೃಂಗಾರ-ಭಾವೋತ್ತೇಜಕವಾದ ಚಿತ್ರಪಟಗಳು, ಸಂಯಮಿಗಳನ್ನೂ ಸಂಭ್ರಾಂತರನ್ನಾಗಿ ಮಾಡುವುವು. ಉಪ್ಪರಿಗೆಯ ನೆಲಗಟ್ಟು ಕೊಂಚವೂ ಕಾಣದಂತೆ ರತ್ನಗಂಬಳಿಯು ಮುಚ್ಚಿಕೊಂಡಿದೆ. ಮಧ್ಯದಲ್ಲಿ ಒಂದು ಕುಸುರು-ಗೆತ್ತಿದ ಮೇಜು. ಅದರ ಮೇಲೆ—ಅಲ್ಲಿ ಹಚ್ಚಿ ಇರಿಸಿದ ಪೆಟ್ರೋಮ್ಯಾಕ್ಸ್‌ದೀಪದ ಕಿರಣಗಳನ್ನು ಮರಳಿ ಹೊರಕ್ಕೆ ತೂರುತ್ತಿರುವ—ಒಂದು ಬೆಳ್ಳಿಯ ತಟ್ಟೆಯಲ್ಲಿ ಪನ್ನೀರುದಾನಿ, ಅತ್ತರ್‌ದಾನಿಗಳು; ಒಳ್ಳೆಯ ಬಿಳಿಯೆಲೆಗಳು. ಅದರ ಬಳಿಯಲ್ಲಿಯೇ ತಾಂಬೂಲದ ಸಾಮಗ್ರಿಗಳನ್ನು ಒಳಗೊಂಡ ಬೆಳ್ಳಿಯ ಡಬ್ಬಿಯೊಂದು. ಇನ್ನೊಂದು ತಟ್ಟೆಯಲ್ಲಿ ಸೇಬು, ಕಿತ್ತಳೆ, ಬಾಳೆ, ಅಂಜೂರಿ ಮೊದಲಾದ ಇನಿವಣ್ಣುಗಳು. ಬಟ್ಟಲೊಂದರಲ್ಲಿ ಕಮ್ಮಗೆ ಕಾಯಿಸಿದ್ದ ಕೆನೆವಾಲು. ಬೆಳ್ಳಿಯ ಕುಸುರು-ಗಿಡವೊಂದು ಅಗರುಬತ್ತಿಯ ಹೊಗೆಯನ್ನುಗುಳುತ್ತ, ಬೀದಿಯಲ್ಲಿ ತಿರುಗುತ್ತಿದ್ದವರನ್ನೂ "ಹಹಹ!" ಎಂದು ಬಾಯಿ ತೆರೆಯಿಸುತ್ತಿದ್ದಿತು. ಮಂಚದ ಮುಂದುಗಡೆಯಲ್ಲಿಯೇ ಬೆಳ್ನನೆಯ ಮೇಲ್ಹಾಸಿನಿಂದ ಕೂಡಿದ—ಕುಳಿತುಕೊಳ್ಳುವ ಗಾದೆಯೊಂದಿದೆ. ಮೇಲೆ ಒಂದೇ ಒಂದು ಉದ್ದವಾದ ಒರಗುದಿಂಬು ಇರಿಸಿದೆ.

ಹನ್ನೊಂದುಗಂಟೆ ರಾತ್ರಿಯಾಗಿರಬಹುದು. ಅವಂತಿಕೆಯು ಗಾದಿಯ ಒಂದುಬದಿಗೆ ಕುಳಿತುಕೊಂಡಿದ್ದಾಳೆ. ಉಟ್ಟುದು ಅಚ್ಚ ಬಿಳಿಯ ಬಣ್ಣದ ಪತ್ತಲ; ತೊಟ್ಟುದು ಪಚ್ಚೆಯ ಮೆರುಗಿನ-ಸರಿಗೆಯಂಚಿನ ಕುಪ್ಪಸ. ತಾಂಬೂಲ ಸೇವನದಿಂದ ಚೆಂದುಟಿಯು ಇನ್ನಿಷ್ಟು ಒಪ್ಪನ್ನು ಪಡೆದಿದೆ. ಆಕೆಯ ಬಲದೊಡೆಯ ಮೇಲೆ ತಲೆಯನ್ನಿಟ್ಟು, ಎಡಮಗ್ಗುಲಿನಿಂದ ಗಿರಿಧರನು ಗಾದಿಯುದ್ದಕ್ಕೂ ಬಿದ್ದುಕೊಂಡಿದ್ದಾನೆ. ಹದ-ಮಾಡಿಟ್ಟ ತಂಬೂರಿಯು ಅವಂತಿಕೆಯ ಮುಂದೆ ಇದ್ದಿತು. ಕಿರುನಗೆ-ಮೊಗದ ಓರೆಗಣ್ಣಿನಿಂದ ಗಿರಿಧರನನ್ನು ನೋಡುತ್ತ ಅವಂತಿಕೆಯು, ತಂಬೂರಿಯ ತಂತಿಯನ್ನೊಂದು ಸಲ ಮಿಡಿದಳು. ಗಿರಿಧರನು ಕಣ್ಣು-ಮುಚ್ಚಿಕೊಂಡೇ ಹೇಳಿದ :

"ಹೂಂ! ಆಗಲಿ ವಸಂತರಾಗ!"

ಗಿರಿಧರನು ಹೇಳಿದೊಡನೆಯೆ ಅವಂತಿಕೆಯೂ ತಂಬೂರಿಯನ್ನು ಕೈಗೆ ತೆಗೆದುಕೊಂಡು ತಂತಿಗಳನ್ನು ಮಿಡಿಯತೊಡಗಿದಳು. ಬಳಿಕ ಸಂಗೀತ ಪ್ರಾರಂಭಿಸಿ, ವಸಂತರಾಗಕ್ಕೆ ಮೊದಲುಮಾಡಿದಳು. ಮಾಡದೆ ಏನು ಮಾಡುವಳು? ಆತನ ಮನಸ್ಸನ್ನು ಅಳುಕಿಸಲಿಕ್ಕೆ ಅವಳೇನು ಉಷೆಯೇ? ಅಳುಕಿಸಿದರೆ ತನ್ನ ಮನೆಯನ್ನು ತುಂಬಿಕೊಳ್ಳಲಿಕ್ಕೆ ಸಾಧ್ಯವಿದೆಯೇ?

ಅವಂತಿಕೆಯ ಸಂಗೀತಕ್ಕೆ ಗಿರಿಧರನು ತಲೆದೂಗುತ್ತಲಿದ್ದ. ಆದರೆ ಆತನು ಮನಸ್ಸಿನಲ್ಲಿ ಏನನ್ನು ಭಾವಿಸುತ್ತಿದ್ದನೋ! ಸಂಗೀತವನ್ನು ನಿಲ್ಲಿಸಿದೊಡನೆಯೆ ನಿದ್ದೆಯಿಂದ ಎಚ್ಚತ್ತವನಂತೆ ಎದ್ದುಕುಳಿತ. ವಿಚಿತ್ರವಾದ ಎದೆಯ ಕೊರೆತವನ್ನು ಸೂಚಿಸುವ ಸ್ವರದಲ್ಲಿ ಮಾತನಾಡಿದ:

"ನೋಡು ಅವಂತಿಕೆ! ನನ್ನ ಸೋದರಮಾವನ ಮಗಳೊಬ್ಬಾಕೆ ಇದ್ದಾಳೆ. ಆಕೆಯೂ ಸಂಗೀತವನ್ನು ಚೆನ್ನಾಗಿ ಬಲ್ಲಳು. ವಸಂತರಾಗವನ್ನು ಕೇಳಬೇಕು—ಆಕೆಯ ಬಾಯಿಂದಲೆ ನೋಡು!"

"ಹೀಗೇನು? ಈಗ ಎಲ್ಲಿ ಇದ್ದಾಳೆ ಆಕೆ?"

ಬಿಸುಸುಯ್ಯುತ್ತ ಬಳಲಿದ ಧ್ವನಿಯಲ್ಲಿ ಗಿರಿಧರನು ಹೇಳಿದ:

"ತನ್ನ ತವರುಮನೆಯಲ್ಲಿದ್ದಾಳೆ; ಬಾಗಿಲುಕೋಟೆಯಲ್ಲಿ!"

"ನಿಮ್ಮ ಸ್ವಂತ ಸೋದರಮಾವನ ಮಗಳೇ? ಆಕೆಯ ಹೆಸರೇನು? ತಮ್ಮ ಮದುವೆಯ ಕಾಲಕ್ಕೆ ಬಂದಿದ್ದಳೇ?"

"ಹಾಂ, ನನ್ನ ಸ್ವಂತ ಸೋದರಮಾವನ ಮಗಳು! ಆಕೆಯ ಹೆಸರು..ಉಷಾ—ಎಂದು. ಅವಂತಿಕೇ! ಅವಳ ಹೆಸರು ಕೂಡ ಎಷ್ಟು ಚೆನ್ನಾಗಿದೆ ನೋಡು, ಅಲ್ಲವೇ? ಮದುವೆಯ ಕಾಲದಲ್ಲಿ ಆಕೆ .... ಆಕೆ .... ಹುಂ ..... ಆಕೆ ಬಂದಿರಲಿಲ್ಲ!" ಗಿರಿಧರನು ಮಾತಿನ ಕೊನೆಯೊಡನೆ ಮತ್ತೊಂದು ನಿಟ್ಟುಸಿರನ್ನು ಹೊರಕ್ಕೆ ದೂಡಿದ.

ಅವಂತಿಕೆಯೂ ನಗು-ನಗುತ್ತ ಅಣಕಿಸುವ ಧ್ವನಿಯಲ್ಲಿ ಕೇಳಿದಳು:

" ತಮ್ಮ ಮಹಾರಾಣೀ ಸರಕಾರಕ್ಕೇನಾದರೂ ಸಂಗೀತ ಗೊತ್ತಿದೆಯೇನು ? "

" ಆ ಮಾತನ್ನು ಎತ್ತಬೇಡವೆಂದು ನಿನಗೆ ಅದೆಷ್ಟು ಸಲ ಹೇಳಿಲ್ಲ ! ಹೋಗಲಿ, ಈಗ ಮೇಘಮಲ್ಹಾರದ ಗೀತವೊಂದನ್ನು ಹೇಳಿಬಿಟ್ಟು, ಸಂಗೀತವನ್ನು ಸಾಕುಮಾಡು ! "

ಅವಂತಿಕೆಯು ತಂಬೂರಿಯನ್ನು ಮಿಡಿಯುತ್ತ ಮೇಘಮಲ್ಹಾರವನ್ನು ಆರಂಭಿಸಿದಳು. ಅದೇನೋ—ಇಂದವಳು ಮೇಘಮಲ್ಹಾರದಲ್ಲಿ ಎಂದೂ ತೋರಿಸದಂತಹ ಕುಸುರುಗಳನ್ನು ಮಾಡಿ ಮಾಡಿ ತೋರಿಸುತ್ತಿದ್ದಳು. ಆದರೆ ಗಿರಿಧರನು ಮಧ್ಯದಲ್ಲಿಯೆ ತಡೆದು ನಿಲ್ಲಿಸಿದ ; ಬೇಸತ್ತ ದನಿಯಲ್ಲಿ ಹೇಳಿದ :

" ಅದೇತಕ್ಕೋ ಇಂದು ನನಗೆ ತುಂಬ ತಲೆನೋವು. ಸಂಗೀತವು ಸವಿಯಾಗಿರುವುದಾದರೂ ಮನಸ್ಸಿಗೆ ಹಿತವಿಲ್ಲವಾಗಿದೆ ! "

ಅವಂತಿಕೆಯ ಸಂಗೀತ ನಿಂತಿತು. ತಂಬೂರಿಯ ಮಿಡಿತವೂ ನಿಂತು ಹೋಯಿತು. ಆದರೆ ಅವಳ ಹೃದಯದ ಮಿಡಿತವೇಕೋ ಹೆಚ್ಚಾದಂತೆ ತೋರಿತು.

---

## ೨೮ ನೆಯ ಪರಿಚ್ಛೇದ

ಬಾಗಿಲುಕೋಟೆಯಲ್ಲಿ ಇಂದು ಎಲ್ಲರೂ ದೀನಾನಂದರ ವಾಕ್-ಚಾತುರ್ಯವನ್ನು ಕೊಂಡಾಡುವವರೆ. ನಿನ್ನೆಯ ಸಾಯಂಕಾಲ ಅವರು ಮಾತನಾಡಿದ **' ಬಡತನವು ಸಾಮಾಜಿಕ ಪಾತಕದ ಫಲ '** ಎಂಬ ವಿಷಯವನ್ನು ಕುರಿತಾದ ಉಪನ್ಯಾಸವು, ಕೇಳಿದವರೆಲ್ಲರ ವಿಚಾರಗಳಿಗೂ ಒಂದು ನೂತನಪಥವನ್ನು ತೋರಿಸಿದ್ದಿತು. ಇನ್ನೂ ಒಂದೆರಡು ಉಪ-ನ್ಯಾಸಗಳು ಆಗಲಿಕ್ಕಿದ್ದುವು. ಕೆಲವರು ದೀನಾನಂದರ ಭಾಷೆಯನ್ನು ಹೊಗಳುವರು ; ಇನ್ನು ಕೆಲವರು ಅವರ ವಿಚಾರಸರಣಿಯನ್ನು

ಕೊಂಡಾಡುವರು. ಬೇರೆ ಕೆಲವರು ಅವರ ವಾಗ್ವೈಖರಿಯನ್ನು ವರ್ಣಿಸುವರು. 'ಎಂತಹ ತೇಜಸ್ವಿಯಾದ ಪುರುಷ!' ಎಂದು ತಲೆಯಲ್ಲಾಡಿಸುವವರಿಗೂ ಕೊರತೆಯಿರಲಿಲ್ಲ. 'ಆಯುರ್ವೇದ ಪದ್ಧತಿಯಿಂದ ನಡೆಯಿಸುವ ಅವರ ರೋಗಚಿಕಿತ್ಸೆಯು ರೀತಿಯೂ ಆಶ್ಚರ್ಯಕರವಾದುದು'–ಎಂಬ ಮಾತೂ ಅಲ್ಲಲ್ಲಿ ಕಿವಿಗೆ ಬೀಳುತ್ತಿದ್ದಿತು.

ಇವೆಲ್ಲ ಮಾತುಗಳು ಉಷೆಯ ಕಿವಿಯ ವರೆಗೆ ಬಂದು ತಲ್ಪಿದುವು. ದೀನಾನಂದರು ಆಯುರ್ವೇದವಿಶಾರದರೆಂಬುದನ್ನು ಕೇಳಿ, ತನ್ನ ತಂದೆಯ ಪ್ರಕೃತಿಯನ್ನು ಅವರ ಕಣ್ಣಿಗೊಂದು ಸಲ ಹಾಕಬೇಕೆಂಬ ವಿಚಾರವು ಅವಳ ತಲೆಯಲ್ಲಿ ಬಂದಿತು. ತಂದೆಯನ್ನು ಕೇಳಿ ಸಮ್ಮತಿ ಪಡೆದು, ತಂದೆಯ ಸ್ನೇಹಿತರಾದ ರಂಗರಾಯರನ್ನು ಕರೆಯಿಸಿ, ಹೇಗಾದರೂ ಮಾಡಿ ದೀನಾನಂದರನ್ನು ಕರೆದುಕೊಂಡು ಬರಬೇಕೆಂದು ಬಿನ್ನವಿಸಿ ಕಳುಹಿದಳು. ಜನಸೇವೆಯನ್ನೆ ಜನ್ಮದ ಕಾರ್ಯವೆಂದು ಭಾವಿಸಿದ್ದ ಆ ಮಹನೀಯರು ಇಂತಹ ದೈನ್ಯದ ಕರೆಯನ್ನು ಕೇಳಿ ಬಾರದೆ ನಿಲ್ಲುವರೇ?

ಹಗಲು ಒಂಬತ್ತು ಗಂಟೆಯಾಗಿ ಹೋಗಿದ್ದಿತು. ಉಷೆಯು ದೀನಾನಂದರ ಆಗಮನವನ್ನು ಆತುರತೆಯಿಂದ ಕಾಯುತ್ತ, ತಂದೆಯ ಬಳಿಯಲ್ಲಿ ಕುಳಿತಿದ್ದಳು. ತಿರುಮಲರಾಯರು ಮಗಳಿಗೆ ಹೇಳಿದರು:

"ನೀರು ಕಾಯ್ದಿದ್ದರೆ ಸ್ವಲ್ಪ ತೆಗೆದುಕೊಂಡು ಬಾ. ಮುಖವನ್ನಾದರೂ ಸ್ವಚ್ಛವಾಗಿ ತೊಳೆದುಕೊಳ್ಳುತ್ತೇನೆ!"

ಉಷೆಯು ಎದ್ದು ಹಿಂದಣ ಮನೆಗೆ ಹೊರಟು ಹೋದಳು. ಆಕೆ ಹೋಗಿ ಒಂದು ನಿಮಿಷವಾಗಿದ್ದಿತೋ ಇಲ್ಲವೋ, ರಂಗರಾಯರು ದೀನಾನಂದರನ್ನು ಕರೆದುಕೊಂಡು ಅಲ್ಲಿಗೇ ಬಂದರು. ತಿರುಮಲರಾಯರ ಸ್ವಾಗತದ ದಾರಿಯನ್ನು ಕೂಡ ನೋಡದೆ, ದೀನಾನಂದರು ಒಳಗೆ ಬಂದು, ತಿರುಮಲರಾಯರು ಮಲಗಿದ್ದ ಮಂಚದ ಒಂದು ತುದಿಯಲ್ಲಿ ಕುಳಿತುಕೊಂಡರು; ರಾಯರ ಬಲಗೈಯನ್ನು ಹಿಡಿದು, ನಾಡಿಗಳನ್ನು ಪರೀಕ್ಷಿಸಲು ತೊಡಗಿದರು.

ರಂಗರಾಯರು ನಿಂತುಕೊಂಡೇ ದೀನಾನಂದರನ್ನು ಕುರಿತು ಹೇಳಿದರು :

" ಇವರು ತುಂಬ ದೇಶಾಭಿಮಾನಿಗಳು ಸ್ವಾಮೀಜಿ ! ಸ್ವದೇಶೀ ಉದ್ಯೋಗವನ್ನು ಬೆಳೆಯಿಸಬೇಕೆಂದು, ಒಂದು ನೆಯ್ಗೆಯ ಗಿರಣಿಯನ್ನು ತೆಗೆದು, ಲಕ್ಷಾವಧಿ ರೂಪಾಯಿ ಹಾಳಾಗಿದ್ದಾರೆ ! "

ದೀನಾನಂದರಿಗೆ ಅವರ ಮಾತಿನ ಕಡೆಗೆ ಲಕ್ಷ್ಯವಿದ್ದಿತೊ ಇಲ್ಲವೊ ; ರೋಗದ ಪರೀಕ್ಷೆಯಲ್ಲಿ ಪೂರ್ಣಮನಸ್ಸನ್ನು ತೊಡಗಿಸಿದ್ದರು. ಉಷೆಯು ಬಿಸಿನೀರಿನ ತಂಬಿಗೆಯೊಂದನ್ನು ತೆಗೆದುಕೊಂಡು ಅಲ್ಲಿಗೆ ಬಂದಳು. ಒಳಕ್ಕೆ ಕುಳಿತಿದ್ದವರನ್ನು ಕಂಡು, ಸಂಕೋಚದಿಂದ ಬಾಗಿಲಲ್ಲಿಯೇ ತಡೆದುನಿಂತಳು. ದೀನಾನಂದರ ಬೆನ್ನು ಒಟು, ನಿಡುಗೂದಲಿಂದ ಮುಚ್ಚಿದ್ದ ಹಿಂದಲೆ, ಇದಿಷ್ಟು ಮಾತ್ರ ಅವಳಿಗೆ ಕಾಣುತ್ತಿದ್ದಿತು. ದೀನಾನಂದರು ರಾಯರಿಗೆ ಹೇಳಿದರು :

" ನಾಲಗೆಯನ್ನು ತೆರೆಯಿರಿ ನೋಡೋಣ ! "

ದೀನಾನಂದರ ಧ್ವನಿಯನ್ನು ಕೇಳಿ ಉಷೆಯು ಬೆಚ್ಚಿಬಿದ್ದಳು. ತಾನು ಆ ಧ್ವನಿಯನ್ನು ಕನಸಿನಲ್ಲಿ ಕೇಳುತ್ತಿರುವೆನೊ, ನಿಜವಾಗಿಯೆ ಕೇಳುತ್ತಿರುವೆನೊ–ಎಂದವಳು ಕೊಂಚಕಾಲ ಭ್ರಮೆಗೊಂಡುಹೋದಳು. ತಂದೆ ಬಿಸಿನೀರನ್ನು ತರಲಿಕ್ಕೆ ಹೇಳಿದುದನ್ನೂ ತನ್ನ ಕೈಯಲ್ಲಿ ತಂಬಿಗೆಯಿದ್ದುದನ್ನೂ ಚೆನ್ನಾಗಿ ಪ್ರಮಾಣಕ್ಕೆ ತಂದುಕೊಂಡು, ತಾನೇನು ಈಗ ಕನಸನ್ನು ಕಾಣುತ್ತಿಲ್ಲವೆಂಬುದನ್ನು ಮನಗಂಡಳು. ಒಂದೊಂದಾಗಿ ಅಡಿಯನ್ನು ಮುಂದುವರಿಸಲು ತೊಡಗಿದಳು. ಆನಂದರು ರಂಗರಾಯರನ್ನು ನೋಡುತ್ತ ಹೇಳಿದರು.

" ಬೇನೆಯೇನೂ ಅಷ್ಟೊಂದು ಭಯಕ್ಕೆ ಕಾರಣವಾದುದಾಗಿಲ್ಲ; ರಾಯರಿಗೆ ಕೊಂಚ ಮನಃಸ್ವಾಸ್ಥ್ಯ ಬೇಕು. ಯೋಗ್ಯ ಔಷಧಿಯನ್ನು ಕೊಟ್ಟರೆ, ಖಂಡಿತವಾಗಿಯೂ ಗುಣವಾಗುತ್ತದೆ ! "

ಉಷೆಯು ಮತ್ತೆ ತನ್ನನ್ನು ತಾನೇ ಮರೆತಳು; ಅವಳಿಗೆ ತಿಳಿಯದ ಹಾಗೆಯೆ ಬಾಯಿಂದ ಕೂಗು ಹೊರಟಿತು :

" ಸು–ದ–ರ್ಶ–ನ ! "

ದೀನಾನಂದರು ಹಿಂದಿರುಗಿ ನೋಡಿದರು; ಹುಚ್ಚಿಯಂತೆ, ನಿಂತ ಉಷೆಯ ಮೂರ್ತಿ. ಅವರೂ ಕೊಂಚಕಾಲ ತಮ್ಮ ಕಣ್ಣುಗಳನ್ನು ತಾವೇ ನಂಬದವರಾದರು. ಏನನೂ ತಿಳಿಯದ ಮರುಳರಂತೆ, ಉಷೆಯನ್ನು ಮಿಳಮಿಳನೆ ಅರೆನಿಮಿಷ ನೋಡಿದರು. ಒಣಗಿದ ಕಂಠದಿಂದ ಕೇಳಿದರು:

" ಉಷಾ, ನೀನು ಇಲ್ಲಿ ಏಕೆ ? ಈ ಊರಿಗೆ ಎಂದು ಬಂದಿದ್ದೀಯೆ?"

ಉಷೆಯ ಕೊರಳ ಸಿರದ ಬಿಗಿತವು, ಮಾತುಗಳೇ ಹೊರಕ್ಕೆ ಬಾರದಂತೆ ಮಾಡಿತು. ಕರುಣೆಯನ್ನು ಕರಗಿಸಿ ಎರಕಹೊಯ್ದ ಮೂರ್ತಿಯಂತೆ ಆಕೆ, ಸುಮ್ಮನೆ ನೋಡುತ್ತ ನಿಂತುಬಿಟ್ಟಿದ್ದಳು. ರಾಯರ ಸ್ನೇಹಿತರು ಬೆರಗುಗೊಂಡವರಾಗಿ ನುಡಿದರು :

" ತಮಗೆ ಉಷೆಯ ಪರಿಚಯವಿದೆಯೇ ? ತಿರುಮಲರಾಯರ ಮಗಳಿವಳು ! "

ದೀನಾನಂದರೂ ಬೆಪ್ಪನಂತೆ ಕುಳಿತರು. ತಾನೆತಾನಾಗಿಯೆ ಬಿಸಿಯಾದ ಉಸಿರೊಂದು ಹೊರಕ್ಕೆ ಬಂದಿತು. ಇಬ್ಬರ ರೀತಿಯನ್ನೂ ಕಂಡ ತಿರುಮಲರಾಯರೂ ಅವರ ಸ್ನೇಹಿತರೂ ವಿಸ್ಮಯದೃಷ್ಟಿಗಳಿಂದ ಇಬ್ಬರನ್ನೂ ನೋಡುತ್ತಿದ್ದರು. ಒಂದೆರಡು ನಿಮಿಷ ಯಾರ ಬಾಯಿಂದಲೂ ಮಾತುಗಳೆ ಬರಲಿಲ್ಲ. ನೋಟ-ನೋಟಗಳು ಬಗೆ-ಬಗೆಗಳು, ಪರಾವಾಣಿಯಲ್ಲಿ ಏನೇನು ಮಾತನಾಡುತ್ತಿದ್ದುವೊ ಅರಿತವರಾರು ! ದೀನಾನಂದರೆ ಮೂರ್ಛೆ ತಿಳಿದೆದ್ದವರಂತಾಗಿ ಮಾತನಾಡಿದರು :

" ಇವರು ನಿನ್ನ ತಂದೆಯೆ ಉಷಾ ? "

ಉಷೆಗೆ ತಾನು ಆನಂದದಲ್ಲಿರುವೆನೊ ದುಃಖದಲ್ಲಿರುವೆನೊ ಎಂಬುದರ ಅರಿವೇ ಇಲ್ಲದಂತಾಯಿತು. ಆನಂದರ ಮಾತಿಗೆ ಉತ್ತರ-ಕೊಡಬೇಕೆಂದರೆ ನಾಲಗೆಯೇ ಆಡಲೊಲ್ಲದಾಯಿತು. ಪುತ್ತಿ ಆನಂದರೆ ಕೇಳಿದರು :

" ಏಕೆ, ಉಷಾ, ಮಾತನಾಡುವುದಿಲ್ಲವೇ ? "

ಉಷೆಯು ಕಷ್ಟಪಟ್ಟು ಮಾತನ್ನು ಹೊರಡಿಸಿದಳು :

" ಮಾತನಾಡದೇನು ಮಾಡಲಿ ಸುದರ್ಶನ! ಇದೇನಿದು ವೇಷ ?"

" ಇದು ಸುದರ್ಶನನು ಹಾಕಿದ ವೇಷವಲ್ಲ ಉಷಾ; ದೀನಾನಂದನ ವಾಸ್ತವರೂಪವಿದು. ನಿನಗೆ ಬೇಕಾಗಿದ್ದರೆ ಇದನ್ನೂ ನೀನು 'ಸುದರ್ಶನ' ಎಂಬ ಹೆಸರಿನಿಂದಲೇ ಕರೆಯಬಹುದು !"

ಪ್ರಶ್ನಾತುರದೃಷ್ಟಿಯಿಂದ ರಾಯರು ಉಷೆಯನ್ನು ನೋಡುತ್ತಿದ್ದರು. ಆನಂದಾತುರಗಳನ್ನು ಹೊರಕ್ಕೆಹಾಕುವ ಧ್ವನಿಯಲ್ಲಿ ಆಕೆ ರಾಯರಿಗೆ ಹೇಳಿದಳು :

" ಅಪ್ಪಾ, ಈತನೆ ನನ್ನ ಸುದರ್ಶನ ! "

ತಿರುಮಲರಾಯರು ತಮ್ಮ ಕಳೆಯಿಲ್ಲದ ಕಣ್ಣುಗಳನ್ನು ಅರಳಿಸಿ. ದೀನಾನಂದರನ್ನು ನೋಡಲುತೊಡಗಿದರು. ಅವರ ರೂಪವನ್ನು ಪೂರ್ಣವಾಗಿ ಮನಸ್ಸಿನಲ್ಲಿ ಮೂಡಿಸಿಕೊಂಡು, ಬಳಿಕ ಉಷೆಯ ಕಡೆಗೆ ನೋಡಿ ಸಮಾಧಾನದ ಉಸಿರೊಂದನ್ನು ಹಾಕಿದರು. ರಂಗರಾಯರಿಗೆ ಇದೇನು ಇಂದ್ರಜಾಲವೆಂಬುದು ತಿಳಿಯದಾಯಿತು. 'ಆಗಲಿ, ಆಮೇಲೆ ಕೇಳಿಕೊಂಡರೆ ಆಗದೇ ?' ಎಂದು ಎಷ್ಟು ಸಮಾಧಾನ ಹೇಳಿದರೂ ಮನದ ಅಸ್ಥಿರತೆಯು ಕಡಿಮೆಯಾಗಲಿಲ್ಲ. ಆನಂದರು ಮಾತನಾಡಲು ತೊಡಗಿದರು :

" ಉಷಾ, ತಂದೆಯವರ ಪ್ರಕೃತಿಯನ್ನು ನೋಡಿದೆ. ಹೆದರುವ ಕಾರಣವೇನೂ ಇಲ್ಲ. ಆದರೆ ಈ ಊರನ್ನು ಕೊಂಚಕಾಲ ಬದಲಿಸ ಬೇಕಾಗುತ್ತದೆ. "

ಉಷೆಯು ಮಾತನಾಡುವುದಕ್ಕೆ ಮೊದಲೇ ತಿರುಮಲರಾಯರು ಮೆಲ್ಲಗೆ ನುಡಿದರು :

" ಈ ಊರನ್ನು ಬಿಟ್ಟು ಇನ್ನೆಲ್ಲಿಗೆ ಹೋಗಬೇಕು ? "

ಉಷೆಯು ಕುತೂಹಲದೃಷ್ಟಿಯಿಂದ ಆನಂದರನ್ನು ನೋಡುತ್ತಿದ್ದಳು ಮಾತ್ರ—ಮಾತನೇನೂ ಆಡಲೆ ಇಲ್ಲ. ದೀನಾನಂದರು ಒಂದು ಕ್ಷಣ ಯೋಚಿಸಿ, ತಿರುಮಲರಾಯರನ್ನು ಕುರಿತು ಹೇಳಿದರು :

" ಅದಕ್ಕೇನೂ ತಾವು ಅಷ್ಟೊಂದು ಯೋಚಿಸಬೇಕಾದುದಿಲ್ಲ ! "

ಹಾಗೆಯೇ ಉಷೆಯ ಕಡೆಗೆ ಹೊರಳಿ, ಮಾತನ್ನು ಮುಂದೆ ಸಾಗಿಸಿದರು :

" ಉಷಾ, ಇಲ್ಲಿಯೇ ಸೀತೆಯಮನೆಯಲ್ಲಿ ನಮ್ಮ ಸಂಘದ ಕಾರ್ಯಾಲಯವಿದ್ದುದು ನಿನಗೆ ಗೊತ್ತಿರಬಹುದು. ನಾನು ಯಾವಾಗಲೂ ಅಲ್ಲಿಯೆ ಇರುತ್ತೇನೆ. ಕೃಷ್ಣಾತೀರದ ಸ್ಥಳವದು. ನೀರೂ ಹವೆಯೂ ಚೆನ್ನಾಗಿದೆ. ಯಾವ ದಾಕ್ಷಿಣ್ಯವನ್ನೂ ಮನಸ್ಸಿಗೆ ತಂದುಕೊಳ್ಳದೆ, ತಂದೆಯನ್ನು ಕರೆದುಕೊಂಡು ಅಲ್ಲಿಗೆ ನಡೆದುಬಿಡು. ಬಳಿಯಲ್ಲಿಯೆ ನಾನಿರುವುದರಿಂದ, ಪ್ರತಿದಿನವೂ ಪ್ರಕೃತಿಯನ್ನು ನೋಡಿ ಔಷಧಿ ಕೊಡಲಿಕ್ಕೂ ಅನುಕೂಲವಾಗುತ್ತದೆ ! "

ಉಷೆಯ ಕೃತಜ್ಞತೆಯ ದೃಷ್ಟಿಗೆ ಬಾಯಿಯಿದ್ದರೆ ದೀನಾನಂದರನ್ನು ನುಂಗಿಬಿಡುತ್ತಿದ್ದಿತು. ಆಕೆ ತಂದೆಯ ಕಡೆಗೆ ತಿರುಗಿ ಹೇಳಿದಳು :

" ಅಪ್ಪಾ, ಕೇಳಿದೆಯಲ್ಲವೇ ಸುದರ್ಶನನ— ಅಲ್ಲ—ದೀನಾನಂದರ ಮಾತುಗಳನ್ನು ? "

ರಾಯರು ಒಂದೆರಡು ನಿಮಿಷ ಸುಮ್ಮಗಿದ್ದು ಏನನೋ ಯೋಚಿಸಿ, ಆ ಮೇಲೆ ಮೆಲ್ಲಗೆ ಹೇಳಿದರು :

" ಆಗಲಮ್ಮಾ ! ಸೀತೆಯಮನೆ ದೂರವೇನೂ ಇಲ್ಲ ; ಹೋಗಿಬಿಡೋಣ ! "

ದೀನಾನಂದರ ಮುಖವು ಕೃತಾರ್ಥತೆಯ ಭಾವವನ್ನು ಪ್ರದರ್ಶಿಸಿತು. ಸಂತೋಷ-ವಿಷಾದಗಳ ಬೆರಕೆಯ ಕಿರುನಗೆ ನಗುತ್ತ ಅವರು ಮಾತನಾಡಿದರು :

" ಉಷಾ, ನಿನ್ನನ್ನು ಇಲ್ಲಿ ನೋಡುತ್ತೇನೆಂದು ಕನಸುಮನಸಿನಲ್ಲಿಯೂ ಭಾವಿಸಿರಲಿಲ್ಲ ನೋಡು ! ಗಿರಿಧರನ ಅರ್ಧಾಂಗಿಯಾಗಿ, ಸಂಸಾರದ ಹೊರೆಯನ್ನು ಹೊತ್ತಿದ್ದೀಯೆಂದು ನನ್ನ ತಿಳುವಳಿಕೆಯಿದ್ದಿತು..! " ಎರಡನೆಯ ವಾಕ್ಯವನ್ನು ನುಡಿಯುವಾಗ ಆನಂದರ ಧ್ವನಿಯು ಸ್ವಲ್ಪ ಗಡುಸಾಗಿದ್ದಿತು. ಉಷೆಯು ಹೇಳಿದಳು :

"ನೀನು ಮನೆಬಿಟ್ಟ ಮಾರನೆಯ ದಿನವೆ ನಾನೂ ಮನೆಯನ್ನು ಬಿಡಬೇಕಾಯಿತು!"

"ಏತಕ್ಕಾಗಿ?"

"ನೀ–ನು ಏತಕ್ಕಾಗಿ ಬಿಟ್ಟೆ? ಅದೆಲ್ಲವನ್ನೂ ಆ ಮೇಲೆ ಮಾತನಾಡೋಣವಂತೆ. ಇಂದು ಮಧ್ಯಾಹ್ನ ಊಟಕ್ಕೆ ಇಲ್ಲಿಯೇ ಇದ್ದುಬಿಡು; ನಾನೇ ಅಡಿಗೆ ಮಾಡುತ್ತೇನೆ."

ಇಂದಿನ ಉಷೆಯ ಮುಗುಳುನಗೆ, ಉತ್ಸಾಹದ ಮಾತು–ನಾಲ್ಕು ತಿಂಗಳಿಗೆ ಮೊದಲಿನವು. ಎಂದೂ ಕಾಣದಿದ್ದ ಉಷೆಯ ಉಲ್ಲಾಸದ ಮುಖವನ್ನು ನೋಡಿ ನೋಡಿ, ತಿರುಮಲರಾಯರ ಮೈ ಉಬ್ಬುತ್ತಲಿದ್ದಿತು. ಹೃದಯವು ಹಿಗ್ಗುತ್ತಲಿದ್ದಿತು. ಮಧ್ಯೆ ಮಧ್ಯೆ ತಮ್ಮ ಆಶೀಕೃತಜ್ಞತೆಗಳು ತುಂಬಿ ತುಳುಕುತ್ತಿದ್ದ ಕಣ್ಣುಗಳನ್ನು ಆನಂದರ ಕಡೆಗೆ ಹೊರಳಿಸುತ್ತಿದ್ದರು. ಉಷೆಯ ಮಾತುಗಳಿಗೆ ಪ್ರತಿಯಾಗಿ ಆನಂದರು ಮಾತನಾಡಿದರು:

"ಉಷಾ, ನಿನಗೆ ಅಡಿಗೆ ಮಾಡಲಿಕ್ಕೂ ಬರುತ್ತದೆಯೇನು?"

"ಇಲ್ಲಿಗೆ ಬಂದಮೇಲೆಯೆ ಕಲಿತುಕೊಂಡೆ. ಇಂದು ಅದರ ಪರೀಕ್ಷೆಯೂ ಆಗಿಬಿಡಲಿ!"

ದೀನಾನಂದರ ನಿಟ್ಟುಸಿರು ಕೋಣೆಯಲ್ಲೆಲ್ಲ ಬಿಸುಪನ್ನು ಹರಡಿತು. ಒತ್ತಾಯದಿಂದ ಎಳೆದುತಂದ ನಗೆಯೊಡನೆ, ಅವರು ಉಷೆಗೆ ಹೇಳಿದರು:

"ಮಧ್ಯಾಹ್ನಕ್ಕೆ, ಇಲ್ಲಿಯ ದೊಡ್ಡ ಮನುಷ್ಯರೊಬ್ಬರು ಊಟಕ್ಕೆ ಬಂದೇತೀರಬೇಕೆಂದು, ಅದೆಷ್ಟೋ ಪ್ರೀತಿಯಿಂದ ಹೇಳಿದ್ದಾರೆ. ಆದುದರಿಂದ ಈಗ ಬೇಡ; ರಾತ್ರಿಯ ಊಟಕ್ಕೆ ನಾನು ಇಲ್ಲಿಗೇ ಬಂದು, ಇಲ್ಲಿಯೇ ಇದ್ದುಬಿಡುತ್ತೇನೆ. ಬೇಕಾದಷ್ಟು ಮಾತು-ಕತೆಗಳನ್ನು ಆಡೋಣವಂತೆ. ಉಷಾ, ಇಷ್ಟವಿದ್ದರೆ ನಿನ್ನ ಕೇದಾರಗೌಳವನ್ನೂ ನನಗೆ ಕೇಳಿಸುವೆಯಂತೆ. ಆದರೆ ಒಂದು ಮಾತು: ನಾಳೆಯ ಸಂಜೆಗೆ ನಾನು ಇಲ್ಲಿಂದ ಹೊರಡಲೆ ಬೇಕು. ನೀವೂ ನನ್ನ ಜೊತೆಯಲ್ಲಿಯೆ ಬರುವ ಸಿದ್ಧತೆಯನ್ನು ಮಾಡಿ ಬಿಡಿರಿ; ಸುಮ್ಮನೆ ದಿನಗಳೆಯುವುದು ಒಳಿತಲ್ಲ!"

ದೀನಾನಂದರು ತಿರುಮಲರಾಯರನ್ನು ವಿನಯದಿಂದ ಬೀಳ್ಕೊಂಡು ಹೊರಟುಬಿಟ್ಟರು. ಉಷೆಯು ಅವರನ್ನು ಅನುಸರಿಸಿ ಬೀದಿಯ ಬಾಗಿಲ ವರೆಗೂ ಬಂದಳು. ದೀನಾನಂದರು—ರಾಯರ ಮನೆಯು ಮರೆಯಾಗುವ ವರೆಗೂ-ಆಗಾಗ ಹೊರಳಿ ಹೊರಳಿ ನೋಡುತ್ತಿದ್ದರು. ಉಷೆಯು-ಜಡವಾದ ಹಜ್ಜೆಗಳನ್ನಿಡುತ್ತ ರಂಗರಾಯರನ್ನು ಹಿಂಬಾಲಿಸಿ ಮೆಲ್ಲಗೆ ಮೆಲ್ಲಗೆ ಸಾಗಿದ್ದ—ದೀನಾನಂದರು ಮರೆಯಾಗುವವರೆಗೂ ಕದಲದ ಕಣ್ಣುಗಳಿಂದ ನಿಟ್ಟಿಸುತ್ತಿದ್ದಳು.

ಉಷೆಯು ಮೆಲ್ಲಮೆಲ್ಲಗೆ ನಡೆಯುತ್ತ ತಂದೆಯ ಕಿರುಮನೆಗೆ ಬಂದಳು. ಸಮಾಧಾನ-ಅಸಮಾಧಾನಗಳೆರಡರ ಬೆರಕೆಯ ಅನುಭವ-ವನ್ನು ಅರಿತುಕೊಳ್ಳುತ್ತ ಸುಮ್ಮನೆ ಕುಳಿತುಕೊಂಡಳು. ತಿರುಮಲ-ರಾಯರು ಸ್ನೇಹಪೂರಿತ ಹೃದಯದಿಂದ ಹೇಳಿದರು.

“ ಉಷಾ, ನಿನ್ನ **ಸುದರ್ಶನ**ನು ನಿಜವಾಗಿಯೂ **ಸು–ದರ್ಶನ**ನು ನೋಡು ! ”

ಅಭಿಮಾನ ಆನಂದಗಳಿಂದ ಉಷೆಯ ಮೈಯು ನವಿರು ನಿಮಿರಿ ನಿಂತಿತಾದರೂ, ಹೃದಯದ ಯಾವುದೋ ಒಂದು ಭಾಗವು ವಿಷಾದದಲ್ಲಿ ಅದ್ದಿತೆಗೆದಂತಹ ಮಾತೊಂದನ್ನು ಆಡಿಸಿತು :

“ ಅಪ್ಪಾ, ಇನ್ನೆಲ್ಲಿಯ ನನ್ನ **ಸುದರ್ಶನ ?** ನನ್ನ ಸುದರ್ಶನನು ದೇಶದ **ದೀನಾನಂದ**ನಾಗಿ ಬಿಟ್ಟಿರುವನಲ್ಲವೆ ? ”

**ಶಾಂತಿಃಪುಷ್ಟಿಸ್ತುಷ್ಟಿಶ್ಚಾಸ್ತು !**